ಇವಳು ಕತ್ತಲ ಕನ್ಯೆ!
ಅಡಗಿದ್ದ ಸೂಯನ್ನ
ಆಕಾಶಕ್ಕೆ ಕೊಡವಿ
ಮತ್ತೆ ಮುಡಿ ಕಟ್ಟುತ್ತಾಳೆ

-ಮಮತಾ ಜಿ. ಸಾಗರ
(ಮಗ್ಗುಲಾದರೆ ರಾತ್ರಿ ಕವಿತೆಯಿಂದ)






# ಸಂಚಯ

ಸಾಂಸ್ಕೃತಿಕ ಪತ್ರಿಕೆ
ತ್ರೈಮಾಸಿಕ

**ಸಂಪುಟ : 10**

**ಸಂಚಿಕೆ 4**

**ಜೂನ್-2001**

*ಸಂಪಾದಕರು*
ಡಿ. ವಿ. ಪ್ರಹ್ಲಾದ್
ರವಿಕುಮಾರಕಾಶಿ

ಚಂದಾ ವಿವರ

ಬಿಡಿ ಪ್ರತಿ : ರೂ 20/-
ವಾರ್ಷಿಕ ಚಂದಾ : ರೂ 80/-



*ಸಂಪರ್ಕ ವಿಳಾಸ*
ನಂ. 100, 2ನೇ ಮುಖ್ಯರಸ್ತೆ
6ನೇ ಬ್ಲಾಕ್, 3ನೇ ಹಂತ, 3ನೇ ಘಟ್ಟ
ಬನಶಂಕರಿ, ಬೆಂಗಳೂರು-560 085
ಫೋನ್ : 080-6791925


*ಮುಖಪುಟ*
ದಿ. ಶಂಕರ ಪಾಟೀಲರ ರೇಖಾಚಿತ್ರ

# ನಿಮ್ಮೊಡನೆ

*ಪ್ರಿಯ ಓದುಗರೆ,*

ಎಲ್ಲೆಡೆ ಮೋಡ ತುಂಬಿದ ಆಕಾಶ, ಆಶಾಢದ ಭರೋ ಎನ್ನುವ ಗಾಳಿಯ ಹಾವಳಿ, ಎಲ್ಲ ಸಮರವೀರ ಸಾಹಿತಿ ಕಲಾವಿದರು ಅಕಾಡೆಮಿಗಳ ವಿವಿಧ ಸ್ಥಾನಗಳಿಗೆ ಪೈಪೋಟಿ ನಡೆಸಿ ಈಗ ದಣಿವು ಆರಿಸಿಕೊಳ್ಳುತ್ತಿರಬಹುದು. ಅಕಾಡೆಮಿಗಳಿಗೆ ಪ್ರಾಧಿಕಾರಕ್ಕೆ ಆಯ್ಕೆಯಾದವರು, ಹೊಸ ಹೊಸ ದೇಖಾವೆಗಳಿಗೆ ಮತ್ತೆ ಹುರುಪುಗೊಳ್ಳುತ್ತಾ ಸಜ್ಜಾಗುತ್ತಿರಬಹುದು. ಎಲ್ಲ ದೊಡ್ಡ ಪತ್ರಿಕೆಗಳಿಗೂ ಮುಖ್ಯವಾದ ವಸ್ತುವಾಗಿ ಈ ಸ್ಥಾನಗಳ ಪೈಪೋಟಿ ಅದಕ್ಕೆ ನಡೆದ ಕೆಳಮಟ್ಟದ ರಾಜಕಾರಣ ಅಪ್ಪಟ ಸುದ್ದಿಗಳಾಗಿ ಜಗಿಯುವ ವಸ್ತುವಾಗಿತ್ತು. ಸಂಚಯ ಒಂದು ವಿಭಿನ್ನ ನೆಲೆಯಲ್ಲಿ ಈ ಅಕಾಡೆಮಿಗಳ ಕಾರ್ಯ-ಸ್ವರೂಪ ಹಾಗೂ ಮಿತಿಗಳನ್ನ ಕುರಿತು ವಿವಿಧ ಅಭಿಪ್ರಾಯಗಳನ್ನ ಸಂಗ್ರಹಿಸಿದೆ.

ಎಲ್ಲ ಕಡೆ ಕಂಡುಬರುವ ಕೊಳಚೆ ಶುರುವಾಗುವುದು ಮನುಷ್ಯನ ಆಳದಿಂದ, ಎಂಥಾ ಉತ್ತಮ ವ್ಯವಸ್ಥೆಯನ್ನೂ ಚುಕ್ಕಾಚೂರು ಮಾಡಿಬಿಡಬಲ್ಲ ಅವನ ಕ್ಷುದ್ರತೆ ಮತ್ತು ಭಂಜಕತನಗಳು ಯಾವಾಗಲೂ ವಿಜೃಂಭಿಸುವುದೇ ದುರಂತ. ಅದರಲ್ಲೂ ಕಟ್ಟುವ ಹೆಸರು ಹೇಳಿಕೊಂಡೇ ಕೆಡವುವ ಕೇಡಿಗತನ ಮನುಷ್ಯನೊಬ್ಬನಿಗೆ ಮಾತ್ರಾ ಸಾಧ್ಯವೇನೋ. ಎಲ್ಲೋ ಓದಿದ ಒಂದು ಪದ್ಯದ ಸಾರಾಂಶ ಹೀಗಿದೆ - ಹುಲಿ ಕೊಲ್ಲುವುದಾದರೆ ಯಾರನ್ನೇ ಆಗಲಿ ನೇರವಾಗಿ ಕೊಂದು ಮುಗಿಸುತ್ತದೆ. ಆದರೆ ಮನುಷ್ಯನ ಹಾಗೆ ನಗು ನಗುತ್ತಾ ಚೂರು ಚೂರೇ ಇಂಚಿಂಚಾಗಿ ಕೊಲ್ಲುವುದಿಲ್ಲ.

ಈ ಸಂಚಿಕೆಯೊಂದಿಗೆ ಸಂಚಯದ ಹತ್ತನೇ ಸಂಪುಟ ಮುಕ್ತಾಯ ವಾಗಿದೆ. ಸಂಚಯಕ್ಕೆ ಕಡೆಯ ಪಕ್ಷ ಒಂದು ಸಾವಿರ ಜನ ವರ್ಷಕ್ಕೆ ಎಂಭತ್ತು ರೂಪಾಯಿ ಕೊಟ್ಟು ಚಂದಾದಾರರಾದಲ್ಲಿ ಎಷ್ಟೋ ಒಳ್ಳೆಯ ಕೆಲಸಗಳು ಸಾಧ್ಯವಾಗುತ್ತವೆ. ನಮ್ಮ ಉತ್ಸಾಹದ ರೆಕ್ಕೆಗೆ ಹಣದ ಬೆಂಬಲ ಬೇಕೇ ಬೇಕು. ಅದಕ್ಕಿಂತಲೂ ಹೆಚ್ಚಾಗಿ ನಿಮ್ಮೆಲ್ಲರ ವಿಶ್ವಾಸ ನಂಬಿಕೆಯದ್ದು, ನಿಮ್ಮ ಇನ್ನೊಂದಿಬ್ಬರು ಗೆಳೆಯರನ್ನ ಚಂದಾದಾರರನ್ನಾಗಿಸಿ, ಇದರ ಸಂಚಯನದ ವ್ಯಾಪ್ತಿ ಹಿಗ್ಗಬೇಕಿದೆ. ನಮ್ಮಗಳ ಕೂತು ಮಾತಾಡುವ 'ಮಾತು'ಗಳು ಇನ್ನಷ್ಟು ಜನಗಳನ್ನ, ಮಿಡಿಯುವ ಮನಸ್ಸುಗಳನ್ನು ತಲುಪಬೇಕಿದೆ.



ನಿಮ್ಮ

***ಸಂಪಾದಕ***

# ದೊಡ್ಡಿ

ರಾಮಲಿಂಗಪ್ಪ ಟಿ. ಬೇಗೂರ್

1

ಅಪ್ಪನ ಹಡಬಿಟ್ಟಿಗಳಿಗೂ ತೊಳಸಿಕ್ಕುವ ದೊಡ್ಡಿ
ನಿನ್ನ ಇನ್ನೊಂದು ಹೆಸರು ಅನ್ನ
ಹೆತ್ತವರೆಲ್ಲ ಅಪ್ಪ ಅಮ್ಮ ಅಲ್ಲ
ನಿನ್ನನ್ನೇ ಕಾಸಿ, ಸೋಸಿ ನನ್ನ ಬೆಳೆಸಿದ ನೀನೇ
ನನ್ನ ನರನಾಡಿಯ ತುಂಬ ಅಪ್ಪ ಅಮ್ಮ

ಸೊಂಟದ ಬಾಳೆಕಾಯಲ್ಲಿ ಸುಟ್ಟರೊಟ್ಟಿಯ ಮುದುರಿಟ್ಟು
ಆಗಾಗ ದನದ ಗ್ವಾಂದಿಗೆಯಲ್ಲಿ ಕದ್ದು ತಿನ್ನಿಸಿ
ಕೆನ್ನೆ ಕಣ್ಣೀರ ನೀನೊರಸಿದ್ದು ಎಷ್ಟೊಂದು ದಿನ
ನೆನಪಾಗಿ ಕಾಡುತ್ತಿದೆ ದಿನಾ

ಮೊನ್ನೆ ನನ್ನ ಮೊದಲ ಸಂಬಳ ಬಂದಾಗ
ತಂದ ನಾಕು ಸೇಬಲ್ಲಿ ಎರಡನ್ನು
ಹಲ್ಲಿಲ್ಲದ ಮುದುಕನಿಗಾಗಲಿ ಅಂತ
ಬಾನದ ಸಾಲಿನ ತಳಮಡಕೆಯ ರಾಗಿಲಿ
ಒತ್ತಾಕಿದವಳು ನೀನು.


ಕೆ.ಕೆ. ಹೆಬ್ಬಾರ್

ಬೆಕ್ಕು, ನಾಯಿ, ದನ, ನಾನು ಅವರು
ಈ ಮಕ್ಕಳಲ್ಲಿ ಒಂದಿನವೂ ಭೇದ ಮಾಡಿದ್ದಿಲ್ಲ ನೀನು.
ಅವೆಲ್ಲ ಈದು, ಪಾಲಾಗಿ, ಮುದಿಯಾಗಿ
ಅವರಿವರ ಸ್ವತ್ತಾಗಿ ದೂರಾದರೂ
ತವರು ಮನೆಗೆ ಬಂದಂತೆ ಬಂದಾಗೆಲ್ಲ ಎಂದಿನಂತೆ
ನಿನ್ನ ಅಕರಾಸ್ತೆಯ ಮಡಿಲಲ್ಲಿ ಸುಖಿಸುತ್ತವಂತೆ ಮಕ್ಕಳಂತೆ.

2

ಹೆಂಡತಿ ಮಗುವೊಂದಿಗೆ ಯಮಸಾಹಸ ಹರಸಾಹಸ ಮಾಡಿ
ನಿನ್ನಲ್ಲಿ ನಾನು ಬಂದಾಗೆಲ್ಲ ನಿನ್ನಿಂದ ದೂರ ಹೋದಂತೆ
ತಬ್ಬಿ ಗೋಳೋ ಎಂದು ಅಳುತ್ತಿದ್ದ ನಮ್ಮ ದುಃಖಕ್ಕೆ
ಹೊಸ ರೂಪ ಬಂದಂತೆ
ಪ್ರೀತಿಗಿದ್ದ ವ್ಯಾಪ್ತಿ ಮಾತಿಗೆ ಮಾತ್ರ ಸೀಮಿತವಾದಂತೆ
ಎಲ್ಲ ಇದ್ದೂ ಇಂದು ನಾನು ಅನಾಥ.

"ಬೇವು ಮೆಚ್ಚಿದ ಕಾಗೆಗೆ ಮಾವಿಳಿದಪ್ಪಂತೆ" ದೊಡ್ಡಿ
ಸಂಬಂಧ ನಾಲಿಗೆಯ ಸೌಂದರ್ಯಕ್ಕೆ ಇಳಿದಾಯ್ತು. ಈ ಹೆಂಡತಿಯೆಂಬ
ಇವಳಿಗೆ ಹೇಗೆ ಹೇಳಲಿ ತಾಯಭಾವ?
ಇಂದು ನಿನ್ನ ಕೈಯ ಉಳ್ಳಿಕಾಳ ಕಟುಕಲಸಮ್ರು
ಕಂಟುತುಪ್ಪ, ತಲೆಗಾರ್ತ ಮುದ್ದೆ ಎಲ್ಲ
ಅದೇ ಬಾಲ್ಯದೊಂದಿಗೆ ನನ್ನ ನಮಲುವಾಗ ಹೆಂಡತಿಯೆಂಬ ಇವಳು
ನರಕಕ್ಕೆ ಬಿದ್ದ ಪುಣ್ಯಕೋಟಿಯ ಹಾಗೆ ನರಳುತ್ತಾಳೆ.

ದೊಡ್ಡಿ ನಿನ್ನದೇ ಬೆಳಸು ಉಣ್ಣುವ ಇವಳಿಗೋ
ನಿನ್ನ ಇತಿಹಾಸ ಕಾಲ ಕಸ
ನಿನ್ನ ಹೆಸರೆತ್ತಿದರೆ ಹಳ್ಳಿ ಹೊಲಸು ದುಸ್ವಪ್ನ.

ದಿನವುರುಳಿದಂತೆಲ್ಲ ನನ್ನ ಹೊಟ್ಟೆಯಲ್ಲಿ
ಕೆನ್ನೆ ಕಣ್ಣೀರು ಒರೆಸಿದ ಕೈ ಬೆರಳು ಥಳಕಾಗಿ ಹರಿದು
ನಿನ್ನ ಬೆರಕೆ ಸೊಪ್ಪಿನ ಸಾರು ಇವಳ ಗೋಬಿ ಮಸಾಲ ಎರಡೂ ವಾಂತಿ.

3

ದೊಡ್ಡಿ
ಬೆಕ್ಕುಗಳು ಹೋದವು ಬೆಕ್ಕುಗಳು ಬಂದವು.
ನಾಯಿಗಳು ಹೋದವು ನಾಯಿಗಳು ಬಂದವು
ಮಕ್ಕಳು ಹೋದವು ಮುಖವಾಡಗಳು ಬಂದವು

ಇಂದೂ
ಬೆಕ್ಕು ನಾಯಿಗಳ ಪಕ್ಕ ಮಲಗುವ ನಿನ್ನ
ಮತ್ತು
ಪಟ್ಟಣವನ್ನೇ ಪಕ್ಕ ಮಲಗಿಸಿಕೊಳ್ಳುವ ಇವಳ
ನಡುವೆ
ಎಲಾಸ್ಟಿಕ್ಕಿನ ಹಾಗೆ ಎಳೆಸಿಕೊಳ್ಳುತ್ತ ನಾನು
ಇಂದೂ......................

# ಅಕಾಡೆಮಿಗಳು ಮತ್ತು ನೇಮಕಾತಿ

■ ಜಿ. ಪಿ. ಬಸವರಾಜು

ರಾಜ್ಯದಲ್ಲಿ ಹನ್ನೊಂದು ಅಕಾಡೆಮಿಗಳಿವೆ. ಸಾಹಿತ್ಯ, ಜಾನಪದ, ರಂಗಭೂಮಿ, ಲಲಿತಕಲೆಗಳು ಹೀಗೆ ಕರ್ನಾಟಕದ ಒಟ್ಟೂ ಸಂಸ್ಕೃತಿಯ ಬೆಳವಣಿಗೆಗೆ ಪೂರಕವಾಗುವಂಥ ಚಟುವಟಿಕೆಗಳನ್ನು ನಡೆಸುವ ಉದ್ದೇಶದಿಂದ ರೂಪುಗೊಂಡ ಸ್ವಾಯತ್ತ ಸಂಸ್ಥೆಗಳು ಇವು. ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಬೆಳವಣಿಗೆಯೂ ಸಮಾಜದ ಆರೋಗ್ಯದ ದೃಷ್ಟಿಯಿಂದ ಅತ್ಯಂತ ಮಹತ್ವವಾದದ್ದು ಎಂಬ ತಿಳುವಳಿಕೆಯೇ ಈ ಸಂಸ್ಥೆಗಳ ಹುಟ್ಟಿಗೆ ಕಾರಣ.

ರಾಜ್ಯದಲ್ಲಿ ಈವರೆಗೆ ಬಂದು ಹೋಗಿರುವ ಸರ್ಕಾರಗಳು ಕೂಡಾ (ಆಗೊಮ್ಮೆ ಈಗೊಮ್ಮೆ ಬೇರೆ ಬೇರೆಯ ಕಾರಣಗಳಿಗೆ ತಾತ್ಕಾಲಿಕವಾಗಿ ಅನಾದರದಿಂದ ನೋಡಿರುವುದನ್ನು ಬಿಟ್ಟರೆ) ಅಕಾಡೆಮಿಗಳನ್ನು ಗೌರವದಿಂದಲೇ ನೋಡಿವೆ. ಆ ಮೂಲಕ ಸಾಹಿತಿಗಳನ್ನು, ಕಲಾವಿದರನ್ನು, ಸಾಂಸ್ಕೃತಿಕ ಪ್ರತಿನಿಧಿಗಳನ್ನು ಘನತೆಯಿಂದಲೇ ನಡೆಸಿಕೊಂಡಿವೆ. ಮೂಲಭೂತವಾದಿಗಳು ಮತ್ತು ಸರ್ವಾಧಿಕಾರಿ ಧೋರಣೆಯ ಶಕ್ತಿಗಳನ್ನು ಬಿಟ್ಟರೆ ಉಳಿದೆಲ್ಲ ರಾಜಕಾರಣಿಗಳಿಗೂ ಸಾಹಿತ್ಯ, ಕಲೆ ಮತ್ತು ಸಂಸ್ಕೃತಿಗಳ ಬಗ್ಗೆ ಒಂದು ಬಗೆಯ ಗೌರವ ಇದ್ದೇ ಇರುವುದನ್ನು ನಾವು ನೋಡುತ್ತ ಬಂದಿದ್ದೇವೆ. ಇದಕ್ಕೆ ಕಾರಣಗಳು ಏನೇ ಇರಬಹುದು. ಇಲ್ಲಿ ಅದರ ವಿಶ್ಲೇಷಣೆ ಅನಗತ್ಯ.

ಇಂಥ ಸನ್ನಿವೇಶದಲ್ಲಿ ಸಾಹಿತಿಗಳು, ಕಲಾವಿದರು ತಮ್ಮ ಹೊಣೆಗಾರಿಕೆಯನ್ನು ಜವಾಬ್ದಾರಿಯುತವಾಗಿ ನಿರ್ವಹಿಸಿದ್ದಾರೆಯೇ? ಅಕಾಡೆಮಿಗಳ ಸ್ಥಾಪನೆಯ ಹಿಂದಿದ್ದ ಉದ್ದೇಶಗಳ ಈಡೇರಿಕೆಗಾಗಿ ಪ್ರಾಮಾಣಿಕವಾಗಿ ಪ್ರಯತ್ನಿಸಿದ್ದಾರೆಯೇ? ಇಂಥ ಪ್ರಶ್ನೆಗಳಿಗೆ ಉತ್ತರ ಸುಲಭವಾಗಿ ಮತ್ತು ಸರಳವಾಗಿ ಸಿಕ್ಕುವುದಿಲ್ಲ. ಅಕಾಡೆಮಿಗಳ ಈವರೆಗಿನ ಇತಿಹಾಸದ ಪುಟಗಳನ್ನು ತಿರುವಿದರೆ ಹಲವು ಬಗೆಯ ಉತ್ತರಗಳು ಸಿಕ್ಕುತ್ತವೆ.



ಅಕಾಡೆಮಿಗಳ ಪದಾಧಿಕಾರಿಗಳ ಕಾಲಾವಧಿ ಮುಗಿಯಿತು ಎಂಬುದನ್ನು ರಾಜಕಾರಣಿಗಳಿಗೆ ನೆನಪಿಸುವವರೇ ಈ ಸಾಹಿತಿಗಳು ಮತ್ತು ಕಲಾವಿದರು ಎಂಬ ಹಂತಕ್ಕೆ ನಮ್ಮ ಸಾಹಿತ್ಯ ರಾಜಕಾರಣ ಬಂದು ನಿಂತಿದೆ. ಅರ್ಹ ವ್ಯಕ್ತಿಗಳನ್ನು ಆರಿಸಿ ಇಂಥ ಅಕಾಡೆಮಿಗಳಿಗೆ ಸರ್ಕಾರವೇ ತಂದು ಕೂರಿಸಬೇಕಾದ ಪರಿಸ್ಥಿತಿ ತಲೆಕೆಳಗಾಗಿ, ನಮ್ಮ 'ಸಾಹಿತ್ಯ ರಾಜಕಾರಣ' ರಾಜಕಾರಣಿಗಳ ಕದ ತಟ್ಟುವ, 'ಈ ಕುರ್ಚಿಗೆ ನಾನೇ ಅರ್ಹ, ನನ್ನ

ಕಡೆಗೊಮ್ಮೆ ನೋಡಿ' ಎಂದು ಸಾಹಿತಿ-ಕಲಾವಿದರು(?) ಹಲ್ಲುಗಿಂಜುವ ಹೊಸ ಬೆಳೆಯನ್ನು ಸೃಷ್ಟಿಸಿದೆ. ಇದು ವರ್ಷ ವರ್ಷವೂ ತನ್ನ ವಿಶ್ವರೂಪವನ್ನು ತೆರೆಯುತ್ತಲೇ ಹೋಗುತ್ತಿರುವುದು ನಾಗರಿಕ ಸಮಾಜವನ್ನು ತಲೆತಗ್ಗಿಸುವಂತೆ ಮಾಡಿದೆ.

**ಸಜ್ಜನರು ದೂರ**

ಈ ಸ್ಥಾನಗಳನ್ನು ಆಕ್ರಮಿಸಲು, ತಮ್ಮನ್ನು ಸಾಹಿತಿಗಳು, ಕಲಾವಿದರು ಎಂದು ಕರೆದುಕೊಳ್ಳುವವರ ನಡುವೆ ಪೈಪೋಟಿ ಎಷ್ಟು ಬಿರುಸಿನಿಂದ ನಡೆಯುತ್ತಿದೆ ಎಂದರೆ ರಾಜಕಾರಣಿಗಳೇ ಬೆಚ್ಚಿಬೀಳುತ್ತಿದ್ದಾರೆ. ಮಠದ ಸ್ವಾಮಿಗಳಿಂದ ಶಿಫಾರಸು ಪತ್ರಗಳು, ಶಾಸಕರಿಂದ, ಮಂತ್ರಿಗಳಿಂದ ಒತ್ತಡಗಳು, ಹಲವು ಸಂಘ ಸಂಸ್ಥೆಗಳಿಂದ ಒತ್ತಾಯಗಳು......ಸರ್ಕಾರವನ್ನು ಮಣಿಸಲು ಏನೆಲ್ಲ ತಂತ್ರಗಳನ್ನು, ಹುನ್ನಾರಗಳನ್ನು ಬಳಸಬಹುದೋ ಅವೆಲ್ಲವನ್ನೂ ಬಳಸಲು, ಯಾವ ಹಂತಕ್ಕೂ ಹೋಗಲು ನಮ್ಮ ಸಾಂಸ್ಕೃತಿಕ ಕ್ಷೇತ್ರದ ರಾಜಕಾರಣಿಗಳು ಸಿದ್ಧವಾಗಿಯೇ ನಿಂತಿರುತ್ತಾರೆ. ಅನೇಕ ಸಂದರ್ಭಗಳಲ್ಲಿ ಸರ್ಕಾರಗಳೂ ಈ ಒತ್ತಡಕ್ಕೆ ಮಣಿದು ನೇಮಕಗಳನ್ನು ಮಾಡಿವೆ. ಇದರ ಫಲವಾಗಿ ಜಾತಿ, ಗುಂಪು, ಪ್ರಾದೇಶಿಕತೆ, ಮೀಸಲಾತಿ ಯಾವ ಅಸ್ತ್ರವನ್ನು ಬಳಸಲೂ ಹಿಂಜರಿಯದ ವ್ಯಕ್ತಿಗಳ ದೊಡ್ಡ ಸಮೂಹವೇ ನಮ್ಮ ಸಾಂಸ್ಕೃತಿಕ ಕ್ಷೇತ್ರದಲ್ಲಿ ಈಗ ತಲೆ ಎತ್ತಿ ನಿಂತಿದೆ. ಇಂಥ ಕೃತ್ಯಗಳಿಗೆ ಹೇಸುವ, ತಮ್ಮ ಘನತೆಯನ್ನು ಕಾಯ್ದುಕೊಂಡು ತಂತಮ್ಮ ಕ್ಷೇತ್ರಗಳ ಕಾರ್ಯಗಳನ್ನು ಮೌನವಾಗಿಯೇ ಮಾಡಿಕೊಂಡು ಹೋಗುವ ಸಜ್ಜನರು ಇಂಥ ಅಕಾಡೆಮಿಗಳಿಂದ ದೂರವೇ ಉಳಿಯುತ್ತಿರುವ ಸನ್ನಿವೇಶ ಈಗ ಉಂಟಾಗಿದೆ.

ಇಂಥ ಮೌನಿಗಳನ್ನೇ ಹುಡುಕಿ ಅವರಿಗೆ ಈ ಅಕಾಡೆಮಿಗಳ ಅಧ್ಯಕ್ಷ ಸ್ಥಾನಗಳನ್ನು ನೀಡುವ ಆಲೋಚನೆಯೂ ಸರ್ಕಾರದಲ್ಲಿ ನಡೆಯುತ್ತಿದೆ ಎಂಬ ಹೊಸ ಸುದ್ದಿಯೊಂದು ಎಲ್ಲರಲ್ಲಿ ಸೋಜಿಗ ಹುಟ್ಟಿಸಿದೆ. ಇದು ನಿಜವಾದರೆ ಮೊದಲು ಸರ್ಕಾರವನ್ನು ಅಭಿನಂದಿಸಬೇಕು. ಇಷ್ಟು ವರ್ಷಗಳ ನಂತರವಾದರೂ ಇಂಥ ಆಲೋಚನೆಯೊಂದು ನಮ್ಮ ಸರ್ಕಾರದ ಹತ್ತಿರ ಸುಳಿಯಿತಲ್ಲಾ ಎಂಬುದು ದೊಡ್ಡ ಸಂಗತಿಯೇ. ಸರ್ಕಾರ ಈ ದಿಕ್ಕಿನಲ್ಲಿ ದಿಟ್ಟವಾದ ಹೆಜ್ಜೆ ಇಡುತ್ತದೆಯೇ ಕಾದು ನೋಡಬೇಕು. ಮೌನಿಗಳನ್ನು ಗುರುತಿಸುವಲ್ಲೂ ಯಾರತ್ತಲಾದರೂ ಕಿವಿಗೊಡುವಂತಾದರೆ ಅದು ಇನ್ನೊಂದು ದುರಂತವಾಗುತ್ತದೆ ಮಾತ್ರ.

ಕಳೆದ ಹತ್ತು ಹದಿನೈದು ವರ್ಷಗಳಿಂದ ಒಂದಲ್ಲ ಒಂದು ಅಕಾಡೆಮಿಯ ಸದಸ್ಯರೋ, ಅಧ್ಯಕ್ಷರೋ ಇನ್ನಾವುದೋ ಆಗಿ 'ಸೇವೆ ಸಲ್ಲಿಸುತ್ತ' ಟಿಎ, ಡಿಎ ಗುಳುಂ ಮಾಡುತ್ತ ಸದ್ದಿಲ್ಲದೆ ಸಂಸ್ಕೃತಿಯ ವಕ್ತಾರರಾಗಿ ಮೆರೆದ ಅನೇಕ ಮಹಾನುಭಾವರು ನಮ್ಮಲ್ಲಿದ್ದಾರೆ. ಸರ್ಕಾರ ಇಂಥವರ ಪಟ್ಟಿಯನ್ನು ತಯಾರಿಸಿ ಇವರನ್ನು ಎಲ್ಲ ಅಕಾಡೆಮಿಗಳಿಂದಲೂ ಹೊರಗಿಡುವ, ಇವರನ್ನು 'ಅನರ್ಹರು' ಎಂದು ಸಾರುವ ಕೆಲಸವನ್ನು ಮೊದಲು ಮಾಡಬೇಕು. ನಂತರದ ಕೆಲಸವೆಂದರೆ ಶಿಫಾರಸು ಪತ್ರ, ಒತ್ತಡಗಳನ್ನು ತರುವವರನ್ನು ದೂರ ಇಡುವುದು. ಮೂರನೆಯ ಹೆಜ್ಜೆಯಾಗಿ, ಅಧ್ಯಕ್ಷ ಸ್ಥಾನಕ್ಕೆ ಅರ್ಹರು ಯಾರು ಎಂಬುದನ್ನು ಸರ್ಕಾರ ತಾನೇ ಕಂಡುಕೊಳ್ಳುವುದು. ಇದಕ್ಕಾಗಿ ಮೂರು ಅಥವಾ ಐದು ಜನ ಪರಿಣತರ (ಆಯಾ ಕ್ಷೇತ್ರದ) ಸಮಿತಿಯನ್ನು ರಚಿಸಿ ಮೂರು ಹೆಸರುಗಳನ್ನು ಕೊಡುವಂತೆ ಕೇಳಿಕೊಳ್ಳುವುದು. ಹೀಗೆ ಬಂದ ಹೆಸರುಗಳ ಪಟ್ಟಿಯನ್ನು ಅಂತಿಮವಾಗಿ ತಾನೇ ಪರಿಶೀಲಿಸಿ ಅಧ್ಯಕ್ಷರನ್ನು ಆಯ್ಕೆ ಮಾಡುವುದು. ಆಗ ಸತ್ಪಾತ್ರರಿಗೆ ಈ ಸ್ಥಾನ ಸಿಕ್ಕು ಅವರಿಂದ ಉತ್ತಮ ಕೆಲಸವನ್ನು ನಿರೀಕ್ಷಿಸಲು ಸಾಧ್ಯ.

ಇಷ್ಟರಿಂದಲೇ ಅಕಾಡೆಮಿಗಳು ಅತ್ಯುತ್ತಮ ಕೆಲಸವನ್ನು ಮಾಡುವುದು ಸಾಧ್ಯವಿಲ್ಲ. ಅಕಾಡೆಮಿಯ ಅಧ್ಯಕ್ಷರ ಆಯ್ಕೆಯಷ್ಟೇ ಮುಖ್ಯವಾದದ್ದು ಸದಸ್ಯರ ಆಯ್ಕೆ. ಅಕಾಡೆಮಿಯ ಅಧ್ಯಕ್ಷರ ಆಯ್ಕೆ ಮುಗಿದ ನಂತರ ಸರ್ಕಾರ, ಅಧ್ಯಕ್ಷರನ್ನೂ ಒಳಗೊಂಡಂತೆ ಮೂವರು ಪರಿಣತರ ಸಮಿತಿಯನ್ನು ರಚಿಸಿ ಸದಸ್ಯರ ದೊಡ್ಡ ಪಟ್ಟಿಯನ್ನು ತಯಾರಿಸಲು ಹೇಳಬೇಕು. ಜಾತಿ, ವರ್ಗ, ಪ್ರಾದೇಶಿಕತೆ ಇತ್ಯಾದಿ ಅಂಶಗಳನ್ನು ಗಮನಿಸುವುದು ಅತ್ಯಗತ್ಯ ಎಂದಾದರೆ ಈ ಪರಿಣತರ ಸಮಿತಿಯೇ ಅವನ್ನೆಲ್ಲ ಗಮನಿಸಿ ಪಟ್ಟಿಯನ್ನು ತಯಾರಿಸಬೇಕು. ಅಂತಿಮವಾಗಿ ಸರ್ಕಾರ ಈ ಪಟ್ಟಿಯಿಂದ ಆಯ್ಕೆ ಮಾಡಿ ಸದಸ್ಯರನ್ನು ನೇಮಿಸಬೇಕು. ಆಗ ಒಂದಿಷ್ಟು ಒಳ್ಳೆಯ ಕೆಲಸವನ್ನು ಅಕಾಡೆಮಿಗಳು ಮಾಡಲು ಸಾಧ್ಯವಾದೀತು.

**ರಣರಂಗ**

ಈಗಿರುವ ಸ್ಥಿತಿಯೇ ಮುಂದುವರಿದರೆ ಎಂಥ ಸನ್ನಿವೇಶಗಳು ಎದುರಾಗಬಹುದು ಎಂಬುದನ್ನು ಈ ಹಿಂದೆ ನಡೆದಿರುವ ಅಕಾಡೆಮಿಗಳ ಸರ್ವ ಸದಸ್ಯರ ಅನೇಕ ಸಭೆಗಳು ತೋರಿಸಿಕೊಟ್ಟಿವೆ. ಚರ್ಚೆ, ವಿಚಾರ ವಿನಿಮಯ ನಡೆಯಬೇಕಾದ ಸಭೆಗಳಲ್ಲಿ ಗುಂಪುಗಾರಿಕೆ, ಇಡೀ ಸಭೆಯನ್ನೇ ಗೊಂದಲಕ್ಕೆ ತಳ್ಳಬಹುದಾದ ವಾಗ್ಯುದ್ಧಗಳು ಇತ್ಯಾದಿ ನಡೆದಿರುವುದನ್ನು ಈ ಸಭೆಗಳು ತೋರಿಸಿಕೊಟ್ಟಿರುವುದು ಅನೇಕರ ಅನುಭವ ಎಂಬುದನ್ನು ಮರೆಯುವಂತಿಲ್ಲ.

ಹೊಸ ಚಿಂತನೆಯನ್ನು ಮೂಡಿಸಬಲ್ಲ, ಹೊಸ ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಳ್ಳಬಲ್ಲ ಸಮರ್ಥರನ್ನು ಸರ್ಕಾರ ತರುವುದಾದರೆ ಅದು ಕರ್ನಾಟಕದ ಸಾಂಸ್ಕೃತಿಕ ಬದುಕಿನಲ್ಲಿ ಹೊಸ ಚಲನೆಯನ್ನು ತರುವುದು ಸಾಧ್ಯ. ಇಲ್ಲವಾದರೆ ಸಾಂಸ್ಕೃತಿಕ ರಂಗದಲ್ಲಿ ಇನ್ನಷ್ಟು ದುಷ್ಟಶಕ್ತಿಯ ರಾಜಕಾರಣಿಗಳು ರಕ್ತಬೀಜಾಸುರರಂತೆ ಹುಟ್ಟಿಕೊಳ್ಳುತ್ತಾರೆ. ಈ ಅರಿವು ಸರ್ಕಾರಕ್ಕೆ ಇರಬೇಕಾದದ್ದು ಈ ಹೊತ್ತಿನ ಅಗತ್ಯ. ಕೃಷ್ಣ ಅವರ ಸರ್ಕಾರ ಈ ನಿಟ್ಟಿನಲ್ಲಿ ಚಿಂತಿಸುತ್ತಿರಬಹುದೆಂಬುದಕ್ಕೆ ಸುಳಿವು ದೊರೆತಿದೆ.

*ಪ್ರಜಾವಾಣಿ* 25-05-01 ●

*"ಸಾಹಿತ್ಯದಲ್ಲೂ ಈಗ ನಾಟಕಕ್ಕೇ ಬಹಳ ಪ್ರಾಶಸ್ತ್ಯ: ಇಪತ್ನಾಲ್ಕು ಗಂಟೆಗಳ ಸಖತ್ ದೇಖಾವೆ. ಬರೀ ರಾಜಾಪಾರ್ಟುಗಳೇ ರಂಗ ಮಂಟಪದಲ್ಲಿ; ತಾಲೀಮು ನಡೆಸದೆ ಖಾಲಿ ರೋಪು ಹಾಕುವ ಚರಿಗೆ ಭರ್ತಿಯವನೂ ಇಲ್ಲಿ ದಿಗ್ದರ್ಶಕನೆ. ಪಾತ್ರವಹಿಸುವ ಹಕ್ಕು ಸರ್ವಸಾಮಾನ್ಯ; ಪ್ರೇಕ್ಷಕ ಸ್ಥಾನ ಶೂನ್ಯ"*

**- ಗೋಪಾಲಕೃಷ್ಣ ಅಡಿಗ**

(ದೆಹಲಿಯಲ್ಲಿ ಕವಿತೆಯಿಂದ)

# ಲಲಿತಕಲಾ ಅಕೆಡೆಮಿಯ ಅಪೂರ್ಣ ರಾಜಕಾರಣ

■ *ಕೆ. ವಿ. ಸುಬ್ರಹ್ಮಣ್ಯಂ*

ಗ್ರೀಕ್ ತತ್ವಜ್ಞಾನಿ ಪ್ಲೇಟೋ ತನ್ನ ಅನುಯಾಯಿಗಳಿಗೆ ಬೋಧಿಸುತ್ತಿದ್ದ ಮರಗಳಿದ್ದ ತೋಪಿಗೆ ಇದ್ದ ಹೆಸರಿನಿಂದ 'ಅಕೆಡೆಮಿ' ಪದ ಹುಟ್ಟಿಕೊಂಡಿತು. ನಂತರ ಕ್ರಮೇಣ ಬುದ್ಧಿಜೀವಿ ಜ್ಞಾನದಾಹಿಗಳು ಸೇರುತ್ತಿದ್ದ ಸಭೆಗಳಿಗೆ ಈ ಪದವನ್ನು ಅನ್ವಯಿಸಲಾಯಿತು. 16ನೆಯ ಶತಮಾನದ ಇಟಲಿಯ ಕಲಾವಿದರು ಮೊದಲ ಬಾರಿಗೆ ತಮ್ಮ ಸಭೆಯ ಸ್ಥಳಗಳಿಗೆ 'ಅಕೆಡೆಮಿಗಳು' ಎಂದು ಕರೆಯಲಾರಂಭಿಸಿದರು. ಇದು ಅಂದಿನ ವಿದ್ವಾಂಸರೊಂದಿಗೆ ಕಲಾವಿದರ ಸಮಾನತೆಯನ್ನು ತೋರುವ ಸಾಧಿಸುವ ಉದ್ದೇಶದ್ದಾಗಿತ್ತು. 18ನೆಯ ಶತಮಾನದಲ್ಲಷ್ಟೇ ಅಕೆಡೆಮಿ ಗಳನ್ನು ಕಲೆಯನ್ನು ಕಲಿಸುವ ಉದ್ದೇಶಕ್ಕಾಗಿ ಸಜ್ಜುಗೊಳಿಸಲಾಯಿತು.

'ಅಕೆಡೆಮಿ' ಎಂಬ ಪದದ ಅರ್ಥವ್ಯಾಪ್ತಿ ಬದಲಾಗುತ್ತ ಬಂದಿರುವ ರೀತಿ, ಇಂದು ಅದು ಹೊಂದಿರುವ ನೆಲೆ ಹಲವು ವೈರುಧ್ಯಗಳ ನಡುವೆಯೂ ಹೊಂದಿರುವ ಪ್ರಾಮುಖ್ಯತೆ ಅಚ್ಚರಿಯನ್ನುಂಟುಮಾಡುತ್ತದೆ. ಕೇಂದ್ರ ಲಲಿತಕಲಾ ಅಕೆಡೆಮಿ ನವದೆಹಲಿಯಲ್ಲಿ 1954ರಲ್ಲಿ ಉದ್ಘಾಟನೆಗೊಂಡ ನಂತರ ರಾಜ್ಯಗಳಲ್ಲಿಯೂ ಅದರ ಕೊಂಬೆಗಳು ಬೆಳೆಯ ತೊಡಗಿದವು. ಹಲವು ದಶಕಗಳ ನಂತರದ ಬೆಳವಣಿಗೆ ಅದರ ಸಾಧ್ಯತೆ ಮತ್ತು ಮಿತಿಗಳನ್ನು ನಮ್ಮ ಮುಂದಿಟ್ಟಿದೆ. ಈ ನಡುವೆ ಅಕೆಡೆಮಿ ಬೇಕೆ? ಬೇಡವೆ? ಎಂಬ ಅದರ ಅಗತ್ಯ, ಅನಗತ್ಯತೆಗಳ ಕುರಿತ ವಾದ ವಿವಾದಗಳು ಮೊನ್ನೆ, ನಿನ್ನೆಯವರೆಗೂ ನಡೆದು ಇಂದಿಗೂ ಮುಂದುವರೆದಿದೆ. ಕರ್ನಾಟಕ ಲಲಿತ ಕಲಾ ಅಕೆಡೆಮಿ ಒಳಹೊಕ್ಕಂತೆ ಅದರ ಅಂದರೆ 'ಅಕೆಡೆಮಿ' ಪದದ ಸಾಂಪ್ರದಾಯಿಕ ಅರ್ಥಕ್ಕೆ* ಪೂರಕವಾಗಿಯೇ ಇದೆ ಎನ್ನಿಸುತ್ತದೆ; ಹಾಗೆಯೇ ಮುಂದುವರೆಯಬಹುದು. ಪ್ರತಿಷ್ಠೆಯ ಸ್ಥಾನ ತನ್ನದೆಂಬ ನಂಬಿಕೆಯಲ್ಲಿಯೇ 'ಇಡೀ ಕನ್ನಡ ಕಲಾರಂಗವೇ ತಾನು' - ಎಂಬ ಸುಳ್ಳು ನಂಬಿಕೆಯ ಬೀಗುವಿಕೆಯಲ್ಲಿಯೇ ಅಕೆಡೆಮಿ ಎಂಬ ಕ್ಲೀಷೆಯ ವ್ಯವಸ್ಥೆಯಿದೆ. ಇಂದು ಇಡೀ ಭಾರತದಲ್ಲಿ 'ಅಕೆಡೆಮಿ'ಗಳಿಗಿರುವ ಸಾಧನ, ಸಾಧ್ಯತೆಗಳಲ್ಲಿ ಸಾಧ್ಯತೆಗಳನ್ನೇ ಹೆಚ್ಚಾಗಿ ದುಡಿಸಿಕೊಂಡ, ಪ್ರಕಟಣಾ ವಿಭಾಗದಲ್ಲಿ ಅಸಾಮಾನ್ಯ ಸಾಧನೆ, ಕಲಾಪ್ರದರ್ಶನಗಳಲ್ಲಿ ಅಪೂರ್ವವೆನ್ನುವಂಥ ಖ್ಯಾತಿ ಪಡೆದಿರುವುದರ ನಡುವೆಯೂ 'ಕ್ಲೀಷೆಯ ವ್ಯವಸ್ಥೆ' ಎಂದೇ ಹೇಳಬೇಕಾಗಿದೆ; ಅಕೆಡೆಮಿ ಉಳಿದುಕೊಂಡು ಮುನ್ನಡೆಯುತ್ತಿದೆ.



* ಅಕೆಡೆಮಿ; ಕಲಾಸಂಸ್ಥೆ, ಪ್ಲೇಟೋವಿನ ಅನುಯಾಯಿ, ಕಾರ್ಯಕ್ಕೆ ಒದಗದ, ಆಗದ, ಹೋಗದ, ಕ್ರಿಯಾತ್ಮಕವಲ್ಲದ. -ಇಂಗ್ಲೀಷ್-ಕನ್ನಡ ನಿಘಂಟು-ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ, 1985.

ಇನ್ನೂ ಹಲವು ಅಕೆಡೆಮಿಗಳು ಹುಟ್ಟಿಕೊಳ್ಳಬಹುದು. ನಮ್ಮ ನೆರೆಯ ಆಂಧ್ರ ಪ್ರದೇಶದಲ್ಲಿ ಕಲೆಗಾಗಿ ಇದ್ದ ಅಕೆಡೆಮಿಯನ್ನು ರದ್ದು ಮಾಡಲಾಯಿತು. ಹೀಗಾಗಿ ಅಲ್ಲಿನ ಕಲಾ ಚಟುವಟಿಕೆಗಳು ನಿಂತಿಲ್ಲ. ಆದರೆ ಕಲಾವಿದರ ಸದಸ್ಯ-ಅಧ್ಯಕ್ಷರ ಆಯ್ಕೆಯ ರಾಜಕಾರಣಕ್ಕೆ ತೆರೆಬಿದ್ದಿತು. ಅವರೂ ಅಲ್ಲಿನ ಕಲಾವಿದರೂ ನಮ್ಮವರಷ್ಟೇ ರಾಷ್ಟ್ರೀಯ-ಅಂತರ್‌ರಾಷ್ಟ್ರೀಯ ಮಟ್ಟಗಳಲ್ಲಿ ಕಾಣಿಸಿಕೊಳ್ಳುತ್ತಿರುವುದನ್ನು ಇಲ್ಲವೆನ್ನುವರಾರು?

ಅಕೆಡೆಮಿಗಳೊಂದಿಗೆ, ಬಹು ಹೆಚ್ಚಿನ ಎತ್ತರವನ್ನು ಸಾಧಿಸಿದ ಕಲಾವಿದರು ಸಂಪರ್ಕವಿಟ್ಟುಕೊಳ್ಳುವುದಿಲ್ಲ ಎಂಬ ನಂಬಿಕೆಯೊಂದಿದೆ. ಅಥವಾ ಅವರು ಆ ಬಗ್ಗೆ ಚಿಂತಿಸುವುದಿಲ್ಲ ಎಂಬುದೂ ನಿಜವಿದ್ದರೂ ಅಂಥವರ ಕಲೆಯನ್ನು ಗುರುತಿಸುವ ಕೆಲಸವನ್ನು ಮಾಡುವುದೂ ಸಹ ನಮ್ಮ ಅಕೆಡೆಮಿಗಳ ಬಹುಮುಖ್ಯ ಕೆಲಸ ಎಂಬುದೂ ಅಷ್ಟೇ ಸತ್ಯ. ಆದರೂ 'ಅಕೆಡೆಮಿ' ಬಗೆಗಿನ ಕಲಾ ಇತಿಹಾಸ ಹುಡುಕಿದರೆ ಅಷ್ಟೇನೂ ಸ್ವಾಗತಕರ ಅಭಿಪ್ರಾಯ ಬಹುತೇಕ ಕಲಾವಿದರಿಗಿಲ್ಲ. ಅವೆಲ್ಲ 'ವ್ಯವಸ್ಥೆ'ಯ 'ವಿರುದ್ಧದ ಧ್ವನಿ'ಗಳಂತೆ ಕೇಳಿಬರುತ್ತಿವೆ. ಅದು "brought about his complete isolation from the community. The artist has been misled by the fatel and arrogant fallacy, with the development of the academies genuine folk art died away. What remained was 'a drawing room art detached from life' ಎಂಬ ಅಭಿಪ್ರಾಯ ಯೂರೋಪಿನ ಒಬ್ಬ ಕಲಾವಿದನದಾದರೆ, ನಮ್ಮ ಎಂ.ಟಿ.ವಿ. ಆಚಾರ್ಯರೂ ಈ ದೃಷ್ಟಿಗಿಂತ ಭಿನ್ನವಲ್ಲದ ರೀತಿಯಲ್ಲಿ ಹಲವು ಬಾರಿ ಪ್ರತಿಭಟಿಸಿದ್ದಾರೆ, ಟೀಕಿಸಿದ್ದಾರೆ. 1981ರಲ್ಲಿ ಕನ್ನಡ ಪ್ರಭ, ಪ್ರಜಾವಾಣಿ, ಡೆಕ್ಕನ್ ಹೆರಾಲ್ಡ್ ಪತ್ರಿಕೆಗಳಲ್ಲಿ ಪ್ರಕಟವಾದ ಹಲವು ಪತ್ರಗಳು, ಪ್ರತಿಕ್ರಿಯೆಗಳನ್ನು ಇಂದಿಗೂ ಪ್ರಸ್ತುತವೆನ್ನಿಸುವ ರೀತಿಯಲ್ಲಿ ಭಾವಿಸುವವರಿದ್ದಾರೆ. ('ಅಕೆಡೆಮಿ', 'ಪಟ್ಟಭದ್ರರು' ಇತ್ಯಾದಿ ಪದಗಳ ಸಹ ಸಂಬಂಧ ಇತ್ತೀಚಿನ ದಿನಗಳವರೆಗೆ, ಸ್ವಲ್ಪ ಮಟ್ಟಿಗೆ ಇಂದಿಗೂ ಇರುವುದರ ಸೂಚನೆಗಳು ಅಲ್ಲಿನ ನಡವಳಿಕೆ, ಆಯ್ಕೆಗಳನ್ನು ಗಮನಿಸಿದವರಿಗೆ ಸಿಗುತ್ತವೆ.) ಆಚಾರ್ಯರ 'ಕಲೆ ಯಾರೊಬ್ಬರ ಸೊತ್ತೂ ಅಲ್ಲ' (ಕನ್ನಡ ಪ್ರಭ, 26-7-1981) 'ನವ್ಯಕಲೆಯ ಅಕಾಡೆಮಿಯೆ?' (ಪ್ರಜಾವಾಣಿ, 8-2-1978) 'Modern Art Akademy?' (Deccan Herald, 10-2-1978) ಪತ್ರಗಳನ್ನು ಇಲ್ಲಿ ನೆನಪು ಮಾಡಿಕೊಳ್ಳಬಹುದು.* ಈ ಹಿಂದೆಯೇ ಯೂರೋಪಿನಲ್ಲಿ 'a protest against the devitalizing influence of the academies' ಆಗಿ ಇಂಗ್ಲೆಂಡಿನಲ್ಲಿ ರಸ್ಕಿನ್ ಮತ್ತು ಮೋರೀಸ್, ಬೆಲ್ಜಿಯಮ್‌ನಲ್ಲಿ ವ್ಯಾನ್‌ಡೇ ವೆಲ್ಡೇ, ಓಲ್ ಬ್ರಿಜ್, ಜರ್ಮನಿಯಲ್ಲಿ ಬೆಹರೇನ್ಸ್ ಮತ್ತಿತರರು, ಪ್ರತಿಭಟಿಸಿದ್ದರು.** ಹೀಗಾಗಿ ಜರ್ಮನಿ ಮತ್ತಿತರೆಡೆಗಳಲ್ಲಿ ಅಕೆಡೆಮಿ ವ್ಯವಸ್ಥೆಗೆ ಪರ್ಯಾಯ ವ್ಯವಸ್ಥೆಗಳೂ ಆದವು. ಆದರೂ ಅಲ್ಲೆಲ್ಲಾ ಅಕೆಡೆಮಿಗಳ ಅಸ್ತಿತ್ವ ಬಿರುಕು ಬಿಡಲೇ ಇಲ್ಲ; ಭದ್ರವಾಗಿಯೇ ಉಳಿಯಿತು! ಆದರೂ ಪಶ್ಚಿಮದ ಕಲಾವಿದನೊಬ್ಬ "The academies

---

* 1980ರಲ್ಲಿ ಎಂ.ಟಿ.ವಿ. ಆಚಾರ್ಯರನ್ನು ರಾಜ್ಯ ಲಲಿತಕಲಾ ಅಕೆಡೆಮಿ ಗೌರವ ಪ್ರಶಸ್ತಿ ನೀಡಿ ಗೌರವಿಸಿತು.

** After fifteen years of struggle we are beginning to free ourselves from the influence of the Academy.
-Paul Gaughin (1848-1903) Letter to Fountainas, March 1899, Thahiti.

exist, full of methods and systems, but alas, what results they produce!" ಎಂದು ಗೊಣಗದಿರಲಿಲ್ಲ. 'ಫ್ಯೂಚರಿಸಂ'ನ ಘೋಷಣೆಯಲ್ಲಿನ ಹತ್ತನೆಯ ಅಂಶ ಹೀಗೆ ಹೇಳುತ್ತದೆ. 'we destroy the museums, libraries, academies of every kind.' ಎನ್ನುತ್ತಲೇ ಅಕೆಡೆಮಿಗಳನ್ನು cemeteries of empty exertion, calvaries of crucified dreams, registries of aborted beginning! ಎಂದೂ ಹೀಗಳೆಯುತ್ತದೆ.*

ನಮ್ಮ ಲಲಿತಕಲಾ ಅಕೆಡೆಮಿಗೆ ಗೌರವಯುತ ಇತಿಹಾಸವಿದೆ. 1964ರಲ್ಲಿ ರಾಜ್ಯ ಸರ್ಕಾರದ ನೆರವಿನಿಂದ ಕರ್ನಾಟಕ ಲಲಿತಕಲಾ ಅಕೆಡೆಮಿ ಅಂದಿನ ಶಿಕ್ಷಣ ಸಚಿವ ಎಸ್. ಆರ್. ಕಂಠಿಯವರ ಅಧ್ಯಕ್ಷತೆಯಲ್ಲಿ ಆರಂಭಗೊಂಡಿತು. 1978ರಿಂದ ಲಲಿತ ಕಲಾಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದವರನ್ನು ಅಧ್ಯಕ್ಷರನ್ನಾಗಿ, ಸದಸ್ಯರನ್ನಾಗಿ ನೇಮಕ ಮಾಡುತ್ತ ಬಂದಿದೆ. ಕೆ. ಕೆ. ಹೆಬ್ಬಾರರಂಥ ವಿಖ್ಯಾತರು ಇದರ ಅಧ್ಯಕ್ಷತೆ ವಹಿಸಿ, ಅದರ ನಡವಳಿಕೆಗಳು ಹೇಗಿರಬೇಕೆಂಬ ಹಾದಿ ತೋರಿಹೋಗಿದ್ದಾರೆ. ವೆಂಕಟಪ್ಪ, ಎಂ.ವಿ. ಮಿಣಜಿಗಿ, ಆರ್. ಎಸ್. ನಾಯಿಡು, ಅಳಂದಕರ್, ಎಂ.ಟಿ.ವೀ. ಆಚಾರ್ಯ, ರೂಮಾಲೆ, ಹಡಪದ್, ವಾಸುದೇವ್, ಯೂಸೂಫ್, ವಿ. ಜಿ. ಅಂದಾನಿಯಂಥ ಹಲವು ಶ್ರೇಷ್ಠರಿಗೆ ಗೌರವ ಪ್ರಶಸ್ತಿ ನೀಡಿ, ನೂರಾರು ಕಲಾವಿದರಿಗೆ ವಾರ್ಷಿಕ ಬಹುಮಾನ ನೀಡಿ ಪ್ರೋತ್ಸಾಹಿಸಿದೆ. ಭಾರತದ ಯಾವುದೇ ಪ್ರಾದೇಶಿಕ ಭಾಷೆಗಳಲ್ಲಿ ಬರದಿರುವಷ್ಟು ಕಲಾ ಸಾಹಿತ್ಯವನ್ನು ಕನ್ನಡದಲ್ಲಿ ಪ್ರಕಟಿಸಲಾಗಿದೆ. ವಾರ್ಷಿಕ ಕಲಾ ಪ್ರದರ್ಶನಗಳನ್ನು ನಿರಂತರವಾಗಿ ನಡೆಸಿಕೊಂಡು ಬರಲಾಗುತ್ತಿದೆ. ಹಲವು ವೈವಿಧ್ಯಮಯ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿದೆ. ಇದರಲ್ಲಿ ಕಲಾಶಿಬಿರ, ಕಲಾ ಪ್ರದರ್ಶನ, ವಿಚಾರ ಸಂಕಿರಣ, ಗ್ರಾಫಿಕ್ ಸ್ಟುಡಿಯೋ, ಗ್ರಂಥಾಲಯ, ಹಿರಿಯ ಕಲಾವಿದರ ಕಲಾ ಕೃತಿಗಳ ಸಂಗ್ರಹ, ಅವುಗಳ ವರ್ಣಪಾರ ದರ್ಶಿಕೆಗಳ ದಾಖಲೆ, ಪ್ರಮುಖ ಕಲಾವಿದರ ವಿಡಿಯೋ ಚಿತ್ರಣ ದಾಖಲೆ, ಕರ್ನಾಟಕದ ಭಿತ್ತಿಚಿತ್ರಗಳ ದಾಖಲೆ ಇತ್ಯಾದಿಗಳನ್ನು ಹೆಸರಿಸಬಹುದು. ಈ ಎಲ್ಲದರ ನಡುವೆ ಅಕೆಡೆಮಿ ತನ್ನ 'ಸರ್ಕಾರಿ ಸಂಪರ್ಕದ ಗತ್ತು' ಅಹಮಿಕೆಯನ್ನು ಬಿಟ್ಟಿಲ್ಲ; ವಿನಯ ಅಲ್ಲಿ ಇಲ್ಲ. ಸಂಪೂರ್ಣ ಸ್ವಾಯತ್ತ ಸಂಸ್ಥೆಯಾದರೂ ಸಂಸ್ಕೃತಿ ಇಲಾಖೆಯ ಹಲವು ನಿಯಮಗಳನ್ನು, ಮಿತಿಗಳು, ಇಲಾಖೆಯ ಸಚಿವರ, ಅಧಿಕಾರಿಶಾಹಿಯ ಪ್ರಭಾವ ಇತ್ಯಾದಿಗಳು ಇದ್ದೇ ಇವೆ. ಅಧ್ಯಕ್ಷರ, ಸದಸ್ಯರ ಆಯ್ಕೆಯ ಮೊದಲ ಹಂತದಿಂದಲೇ ಈ ಪ್ರಭಾವ ಕೆಲಸ ಮಾಡುತ್ತದೆ. ಸರ್ಕಾರವನ್ನು, ಸಚಿವರನ್ನು ಓಲೈಸುವವರಿಗೆ ಅಥವಾ ಅವರ ಮನಸ್ಸಿಗೆ, ಹಲವು ಕಾರಣಗಳಿಂದ, ಸರಿ ಎನ್ನಿಸುವವರಿಗೆ ಅಲ್ಲಿ ಅವಕಾಶ. ಕಲಾರಂಗದಲ್ಲಿ ಗಮನಾರ್ಹ ಸೇವೆ ಸಲ್ಲಿಸಿದರೂ ಅಂಥವರನ್ನು ಅಪರೂಪಕ್ಕೆ ಪರಿಗಣಿಸಬಹುದು. ಅಥವಾ ಹಲವು ನಿಯಮ, ಕಾರಣಗಳನ್ನು ಮುಂದೆ ಮಾಡಿ ನಿರಾಕರಿಸಲೂಬಹುದು. ಕೆಲವೊಮ್ಮೆ ಶ್ರೇಷ್ಠರಿಗೂ ಅವಕಾಶವಿದೆ!

ಆರ್ಥಿಕವಾಗಿಯಂತೂ ಅಕೆಡೆಮಿ ಸಂಪೂರ್ಣವಾಗಿ ಸರ್ಕಾರವನ್ನೇ ಅವಲಂಬಿಸ ಬೇಕಾಗಿರುವುದರಿಂದ 'ಸರ್ಕಾರದ ಹಂಗು' ಅಧ್ಯಕ್ಷ, ಸದಸ್ಯರಿಗೆ ಇದ್ದೇ ಇದೆ. ಸದಸ್ಯರ 'ಆಯ್ಕೆಯ ರಾಜಕಾರಣ' ಹೆಚ್ಚು ವಿವಾದಗಳನ್ನು ಉಂಟುಮಾಡುತ್ತಲೇ ಇರುತ್ತದೆ. ಇದು ಅಕೆಡೆಮಿಯ, ಅದರ ಕೀಲಿ ಕೈಗಳ ನಿಜವಾದ ಮುಖವನ್ನು ಬಯಲು ಮಾಡುತ್ತದೆ. 3 ವರ್ಷಕ್ಕೊಮ್ಮೆ ಮೊದಲ ಕಂತಿನಲ್ಲಿ ಸರ್ಕಾರದಿಂದ ಆಯ್ಕೆಯಾಗುವ ಅಧ್ಯಕ್ಷರು, ಸದಸ್ಯರು ಬಹುತೇಕ ಜಾತಿ, ಮತ, ಜಿಲ್ಲೆ, ರಾಜಕೀಯ

ಪಕ್ಷ ನಿಷ್ಠೆ, ಶಾಸಕರಿಗೆ, ಸಚಿವರಿಗೆ, ಅಧಿಕಾರಿಗಳಿಗೆ ಇರುವ ಸಂಬಂಧ, ಓಲೈಸುವಿಕೆ, ಲಾಬಿ ಮಾಡಿಸುವಿಕೆ ಇತ್ಯಾದಿಗಳ ಹೊರತಾಗಿ ಆಯ್ಕೆಯಾಗುವಂತಿಲ್ಲದಂತಾಗಿರುವುದು ಸಹಜ ಸ್ಥಿತಿಯಂತೆ ಕಾಣಲಾರಂಭಿಸಿದೆ. ಎರಡನೆಯ ಕಂತಿನಲ್ಲಿ ಅಧ್ಯಕ್ಷರ, ಸದಸ್ಯರ, ಕಲಾರಂಗದ ಅಗತ್ಯ ಪೂರೈಸುವವರು ಸದಸ್ಯರಾಗಿ ಬರುತ್ತಾರೆ. ಇಲ್ಲೂ ಮೇಲಿನ ಕಾರಣಕ್ಕಾಗಿ ನೇಮಿಸಲ್ಪಟ್ಟರೆ ಅಕೆಡೆಮಿಗಳ ವ್ಯವಸ್ಥೆಯ ಅಧೋಗತಿ ಅರ್ಥವಾಗುವಂಥದ್ದೇ. ಎಷ್ಟೋ ಸಲ ಪ್ರಕಟಿಸಿದ ಹೆಸರುಗಳೂ ಆಯ್ಕೆಯ ರಾಜಕಾರಣದಲ್ಲಿ 'ರೂಪಾಂತರ'ಗೊಳ್ಳುತ್ತವೆ! ಈ ಎಲ್ಲ ಆಯ್ಕೆಗಳಿಗೆ ಮುನ್ನ ಬೆಂಗಳೂರಿನಲ್ಲಿ ಹಾಗೂ ಜಿಲ್ಲಾ ಕೇಂದ್ರಗಳಲ್ಲಿ ಹಾಗೂ ಸಂಸ್ಕೃತಿ ಇಲಾಖೆಯ ಪ್ರತಿಗೋಡೆ, ಇಟ್ಟಿಗೆಗಳಿಗೂ ತಮ್ಮ ಇರುವ, ಇಲ್ಲದ ಸಾಧನೆಗಳನ್ನು ಒಪ್ಪಿಸಿ ಸದಸ್ಯತ್ವ ಬೇಡುವ, ಕಾಡುವ ಇತರರಿಂದ ಲಾಬಿ ಮಾಡಿಸುವವರೇ ಹೆಚ್ಚಾಗಿ ಕಾಣಿಸಿಕೊಳ್ಳುತ್ತಿದ್ದಾರೆ. ಹೀಗಾಗಿ ಇಲಾಖೆಯನ್ನು 'ಒತ್ತಡ ತಂತ್ರ'ಗಳಿಗೆ ಒಳಗಾಗಿಸುತ್ತಾರೆ!

ಅಪರೂಪಕ್ಕೆ ಅರ್ಹರು ಈ ಯಾವುದನ್ನು ಮಾಡದೆ ಆಯ್ಕೆಗೊಂಡರೂ ಅವರ ಬಗ್ಗೆಯೂ ಗುಮಾನಿ ಪಡುವಂಥ ಸಂದರ್ಭವನ್ನು ಅಧಿಕಾರದಾಹಿ 'ಲಾಬಿ ಕಲಾವಿದರು' ಸೃಷ್ಟಿಸಿಬಿಟ್ಟಿರುವುದು ಇಂದಿನ ದುರಂತ.

ಈ ಹಿಂದೆ 1980ರಲ್ಲಿ ಕರ್ನಾಟಕ ಕಲಾಮೇಳದ ಸಂದರ್ಭದಲ್ಲಿ ವೆಂಕಟಪ್ಪ ಆರ್ಟ್ ಗ್ಯಾಲರಿಯಲ್ಲಿ ಅಕೆಡೆಮಿಯ ಕಾರ್ಯ ವೈಖರಿಯನ್ನು, ಓಬಿರಾಯನ ಕಾಲದ ದೃಷ್ಟಿಯನ್ನು, ಇನ್ನೂ ಹಲವು ನಡವಳಿಕೆಗಳ ಬಗೆಗಿನ ದೂರುಗಳನ್ನು ಪಿ. ಲಂಕೇಶ್‌ರವರಿಗೆ ಅವರನ್ನು ಬೀಳ್ಕೊಡಲು ಬರುತ್ತಿದ್ದ ಕಲಾವಿದರು ಹೇಳಲಾರಂಭಿಸಿದರು. ಆ ಹಿರಿಯ ಕಲಾವಿದರ ನಡುವೆ ಕಿರಿಯನಾದ, ಪಕ್ಕದ ಹಳ್ಳಿಯಿಂದ ಪ್ರತಿದಿನ ಓಡಾಡುತ್ತಿದ್ದ ನಾನು "ಅಕೆಡೆಮಿಯಿಂದ ಹೊರಬನ್ನಿ; ಪ್ರತಿಭಟಿಸಿ' ಎಂದು ಹೇಳಿದ್ದನ್ನೂ ಗಮನಿಸಿದ ಲಂಕೇಶ್ 'ಹಾಗೆ ಮಾಡಿ; ಗಮನಿಸಿ' ಎಂದರು! ಆದರೆ ಹಲವು ವರ್ಷಗಳ ನಂತರವೂ ನಮ್ಮ ಆ ಕಲಾವಿದರು ಆ ಪ್ರತಿಭಟನೆಯ ಕಾರಣಕ್ಕಾಗಿ ಅಕೆಡೆಮಿಯಿಂದ ಹೊರಬರಲೇ ಇಲ್ಲ! ಈಚೆಗೆ ಕೆಲವು ವರ್ಷಗಳ ಹಿಂದೆ ರಾಜೀನಾಮೆ ನೀಡಿದ ಇಬ್ಬರು ಯುವ ಕಲಾವಿದೆಯರು ವೈಯಕ್ತಿಕ ಕಾರಣಗಳಿಗಾಗಿ ರಾಜೀನಾಮೆ ನೀಡಿದರಷ್ಟೆ. ಹಿಂದೆ ಮಾತೆ ಮಹಾದೇವಿಯವರು ಸಾಹಿತ್ಯ ರಂಗದಲ್ಲಿ ಉಂಟುಮಾಡಿದ ವಿವಾದವನ್ನು ಪ್ರತಿಭಟಿಸಿ ರಾಜೀನಾಮೆ ನೀಡಿದ ಸದಸ್ಯರೊಬ್ಬರು ಅದೇ ಅವಧಿಯಲ್ಲಿ ಅಕೆಡೆಮಿಯ ಕಮ್ಮಟವೊಂದನ್ನು ಹೊರ ಕೇಂದ್ರವೊಂದರಲ್ಲಿ ನಡೆಸಿದರು; ನಂತರದ ಅವಧಿಗೆ ಸದಸ್ಯರಾಗಿ ಆಯ್ಕೆಗೊಂಡು ಪೂರ್ಣ ಅವಧಿಯನ್ನೂ ಪೂರೈಸಿದರು. ಇಂದಿಗೂ ಆ ಸಾಹಿತ್ಯ ವಿವಾದ ಮುಗಿದಿಲ್ಲ! ಹೀಗೆ ಅಕೆಡೆಮಿಯ ಒಳಹೊರಗು ವರ್ಣರಂಜಿತ ಪುಟಗಳನ್ನು ಬಿಚ್ಚಿಕೊಳ್ಳುತ್ತಲೇ ಹೋಗುತ್ತದೆ. ಅದರ ಸದಸ್ಯ, ಅಧ್ಯಕ್ಷರಾಗುವುದೇ ಕಲಾವಿದರ ಅಂತಿಮ ಪಾವನಾಮಯ ಗುರಿಯಂತೆ ರಾಜ್ಯದ ಹಲವೆಡೆ ಹಲವರು ಇಂದಿಗೂ ಭಾವಿಸಿದ್ದಾರೆ. ಈ ಆಕರ್ಷಣೆಗೆ ಕೆಲವು ಅಧ್ಯಕ್ಷರ ಅತ್ಯುತ್ತಮ ಉದ್ದೇಶದ ಕಾರ್ಯ ಸಾಧನೆಗಳೂ ಕಾರಣವಾಗಿರಬಹುದು.

●

---

* Filippo tommaso Marinetti (1976-1944)
The foundation and Manifesto of Futurism

## ಅಕಾಡೆಮಿ ಕುರಿತು - ಸಂವಾದ

*ಲಲಿತ ಕಲಾ ಅಕಾಡೆಮಿಯ ರಚನೆ, ಉದ್ದೇಶ, ಯೋಜನೆಗಳು ಹಾಗೂ ಕಾರ್ಯ ವೈಖರಿ ಕುರಿತು ಮೂರು ಕಲಾವಿದರ ಅಭಿಪ್ರಾಯದ ಸಂಗ್ರಹ ರೂಪ : ರವಿಕಾಶಿಯೊಂದಿಗೆ ಸಂವಾದದಲ್ಲಿ,*

*ಎಸ್. ಜಿ. ವಾಸುದೇವ್*

◆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ಅಕಾಡೆಮಿಗಳು ಒಂದೇ ಕೆಲಸವನ್ನು ಪುನರಾವರ್ತನೆ ಮಾಡುತ್ತಿವೆ. ಅವಕ್ಕೆ ಅನನ್ಯವಾದ ಕಾರ್ಯ ಯೋಜನೆಗಳಿಲ್ಲ, ಆದ್ದರಿಂದ ಈ ಎಲ್ಲ ಅಕಾಡೆಮಿಗಳನ್ನು ವಿಲೀನಗೊಳಿಸಿ ಅಕಾಡೆಮಿಯ ಕಾರ್ಯಕ್ರಮಗಳನ್ನು ಸಂಸ್ಕೃತಿ ಇಲಾಖೆಯೇ ನಡೆಸ ಬಹುದು. ಅದು ಅತ್ಯಂತ ಸೂಕ್ತವಾದ ಕ್ರಮ. ಆಗ ವಿವಿಧ ಅಕಾಡೆಮಿ ಗಳನ್ನು ನಡೆಸಲು ವ್ಯಯವಾಗುವ ಹಣವನ್ನು ಉಳಿತಾಯ ಮಾಡಿ ಹೆಚ್ಚಿನ ಯೋಜನೆಗಳನ್ನು ಕೈಗೆತ್ತಿಕೊಳ್ಳಬಹುದು. ಪ್ರತಿಯೊಂದು ಅಕಾಡೆಮಿಯ ಅಧ್ಯಕ್ಷರ ಭತ್ಯೆಗಳು, ಸಿಬ್ಬಂದಿ ವರ್ಗ, ಅವರ ಸಂಬಳಗಳು ಇವೆಲ್ಲ ಅನಗತ್ಯ ವೆಚ್ಚಗಳು, ಹೆಚ್ಚಾದ ಸಿಬ್ಬಂದಿ ವರ್ಗದಿಂದ ಅಕಾಡೆಮಿಗಳ ಕಾರ್ಯಕ್ಷಮತೆ ಏನೂ ಹೆಚ್ಚಿದಂತಿಲ್ಲ! ಇಂತಿಂತಹ ಕಾರ್ಯಕ್ರಮಗಳನ್ನು ನಡೆಸಿ ಎಂದು ಸಂಸ್ಕೃತಿ ಇಲಾಖೆಗೆ ಸಲಹೆ ನೀಡಲು ಅರ್ಹ ವ್ಯಕ್ತಿಗಳ ಒಂದು ಪುಟ್ಟ ಸಮಿತಿ ಸಾಕು.

◆ ಅಲ್ಲಲ್ಲಿ ಕೇಳಿಬರುತ್ತಿರುವಂತೆ - ನೂರಾರು ಕಲಾವಿದರು, ನೌಕರಿಗೆ ಅರ್ಜಿ ಹಾಕಿದ ರೀತಿಯಲ್ಲಿ, ನನ್ನನ್ನು ಅಕಾಡೆಮಿಯ ಮೆಂಬರು ಮಾಡಿ ಎಂದು ಸಂಬಂಧಪಟ್ಟ ಮಂತ್ರಿಗಳಲ್ಲಿ ಅಹವಾಲು ನೀಡಿದ್ದಾರಂತೆ. ಇದು ಹಾಸ್ಯಾಸ್ಪದ, ಈ ಅಭ್ಯಾಸ ಇಡೀ ಕಲಾಸಮುದಾಯಕ್ಕೆ ಕಳಂಕ. ಸಂಸ್ಕೃತಿ ಇಲಾಖೆಯ ಮಂತ್ರಿಗಳು ಈ ಪದ್ಧತಿಯನ್ನು ಪ್ರೋತ್ಸಾಹಿಸ ಬಾರದು. ಮೊದಲು ಅರ್ಹರಾದ ಅಧ್ಯಕ್ಷರನ್ನು ಆರಿಸಿ ನಂತರ ತಮಗೆ ಬೇಕಾದ ಸದಸ್ಯರ ಪಟ್ಟಿಯನ್ನು ತಯಾರು ಮಾಡಲು ಅವರಿಗೆ ಸೂಕ್ತ ಸ್ವಾತಂತ್ರ್ಯ ನೀಡಬೇಕು. ಒಳ್ಳೆಯ ಸದಸ್ಯರ ತಂಡವಿದ್ದಾಗ ರಚನಾತ್ಮಕ ಕೆಲಸಗಳು ತ್ವರಿತವಾಗಿ ಸಾಗೀತು.



◆ ಇನ್ನು ಅಕಾಡೆಮಿ ನಡೆಸಬೇಕಾದ ಕಾರ್ಯಕ್ರಮಗಳ ಬಗ್ಗೆ ಅಕಾಡೆಮಿಯ ಮುಖ್ಯ ಜವಾಬ್ದಾರಿ ನಾಳಿನ ಜನಾಂಗಕ್ಕೆ ದೊರಕುವಂತೆ ಇಂದು, ನಿನ್ನೆಯ ಇತಿಹಾಸವನ್ನು ಜತನವಾಗಿ ಕಾಪಾಡುವುದು. ಅದಕ್ಕೆ ಅಗತ್ಯವಾಗಿ ಬೇಕಾದದ್ದು ಮಾಹಿತಿ ಆಕರ (Archives). ಆದರೆ ಅಕಾಡೆಮಿಯಲ್ಲಿ ಈ archive ಬೆಳೆಸುವ ಯಾವುದೇ ಯತ್ನ ನಡೆದಿಲ್ಲ, ನಾಳೆ ಕಲಾ ಇತಿಹಾಸ ಬರೆಯುವವರಿಗೆ ಈ ಮಾಹಿತಿ ಇಲ್ಲದಿದ್ದರೆ ಮುಖ್ಯವಾದ ಕೊಂಡಿಗಳೇ ಇಲ್ಲದಂತಾಗುತ್ತದೆ. ತನ್ನ ಪ್ರಮುಖ

ಚಟುವಟಿಕೆ ಎಂದು ಅಕಾಡೆಮಿ ಭಾವಿಸುವ ಪುಸ್ತಕ ಪ್ರಕಟಣೆ ಒಂದು ಹಾಸ್ಯವಾಗಿದೆ. ಅದರ ಗುಣಮಟ್ಟ ಎಷ್ಟು ಕಳಪೆಯಿದೆಯೆಂದರೆ ಸಣ್ಣಪುಟ್ಟ ಗ್ಯಾಲರಿಗಳು ಪ್ರಕಟಿಸುವ ಕ್ಯಾಟಲಾಗ್ ಸಹ ಅಕಾಡೆಮಿ ಪ್ರಕಟಣೆಗಿಂತ ಉತ್ತಮವಾಗಿರುತ್ತವೆ. ಇಂತಹ ಕೆಳಮಟ್ಟದ ಪುಸ್ತಕಗಳನ್ನು ಅದರಲ್ಲೂ ದೃಶ್ಯ ಮಾಧ್ಯಮದ ಬಗೆಗಿನ ಪುಸ್ತಕ ಪ್ರಕಟಿಸುತ್ತಿರುವಾಗ ಹೊರ ತರುವುದಕ್ಕಿಂತ ನಿಲ್ಲಿಸಿಬಿಡುವುದೇ ಒಳ್ಳೆಯದು. ಇದನ್ನುಳಿದಂತೆ ಅಕಾಡೆಮಿಯ ವಾರ್ಷಿಕ ಕಲಾಪ್ರದರ್ಶನ ಇತ್ತೀಚೆಗೆ ತನ್ನ ಮಹತ್ವವನ್ನು ಕಳೆದುಕೊಳ್ಳುತ್ತಾ ನಡೆದಿದೆ. ಅದನ್ನು ಗಟ್ಟಿ ಮಾಡಲಿಕ್ಕೆ ತಜ್ಞರ ಒಂದು ತಂಡ ರಾಜ್ಯದ ಒಳಭಾಗಗಳಲ್ಲಿ ಪ್ರವಾಸ ಮಾಡಿ ಅಲ್ಲಿನ ಪ್ರತಿಭೆಗಳನ್ನು ಗುರುತಿಸಿ ಅವರಿಗೆ ಧನಸಹಾಯ ಸಿಗುವಂತೆ ಹಾಗೂ ಆ ಕಲಾವಿದರು ವಾರ್ಷಿಕ ಪ್ರದರ್ಶನದಲ್ಲಿ ಭಾಗವಹಿಸುವಂತೆ ಮಾಡಬೇಕು. ಈ ರೀತಿ ಆಯ್ಕೆ ಮಾಡುವಾಗ ಕೃತಿಯ ಗುಣಮಟ್ಟವಷ್ಟೇ ಮುಖ್ಯವಾಗಬೇಕೇ ಹೊರತು ಆ ಕಲಾವಿದ ಯಾವ ಜಿಲ್ಲೆಯವನು, ಯಾವ ಭಾಗದಿಂದ ಬಂದಿದ್ದಾನೆ ಎಂಬಿತ್ಯಾದಿ ವಿವರಗಳಲ್ಲ. ಇದರೊಂದಿಗೆ ಅಕಾಡೆಮಿ ಸಮಾಜದಲ್ಲಿ ಕಲಾ ಪ್ರಜ್ಞೆಯನ್ನು ಅಧಿಕಗೊಳಿಸುವಂತಹ ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. ಸ್ಥಳೀಯ ಕಲಾವಿದರನ್ನು ಭಾಗವಾಗಿಸಿಕೊಂಡು ಸಣ್ಣ ಪುಟ್ಟ ಶಾಲೆಗಳಲ್ಲೂ ಸಹ ಕಲಾಸ್ವಾದನೆ ಶಿಬಿರಗಳನ್ನು ನಡೆಸಬೇಕು. ಅದರಿಂದ ನಾಳಿನ ಜನಾಂಗ ಕಲೆಗೆ ಹೆಚ್ಚು ಮಹತ್ವ ಕೊಟ್ಟಾರು. ಇದರಲ್ಲಿ ಸ್ಥಳೀಯ ಕಲಾ ಸಂಸ್ಥೆಗಳು, ಕಲಾಶಾಲೆಗಳು, ಮಂಡಳಿಗಳ ಸಹಭಾಗಿತ್ವದಲ್ಲಿ ನಡೆಸಿ ಸಮಾಜದ ಬೇರೆ ಬೇರೆ ಸ್ತರದ ಜನರನ್ನು ಕಲೆ ತಲುಪುವಂತಾಗಬೇಕು. ಸ್ವಾತಂತ್ರ್ಯ ನಂತರದ ಹಲವು ದಶಕಗಳ ನಂತರವೂ ನಾವು ಇದನ್ನು ಸಾಧಿಸಲಾಗಿಲ್ಲ ಎನ್ನುವುದು ಶೋಚನೀಯ.

◆ ಎಲ್ಲದಕ್ಕೂ 'ಹಣವಿಲ್ಲ' ಎಂಬ ಒಂದೇ ರಾಗ ಉತ್ತರವಾಗಿಬಿಟ್ಟಿದೆ. ಇಂತಹ ಅರ್ಥಪೂರ್ಣ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಿಕ್ಕೆ ಯಾವಾಗಲೂ ಸರ್ಕಾರದ ಧನಸಹಾಯದ ಕಡೆ ನೋಡುವ ಅಗತ್ಯವಿಲ್ಲ. ಈಗ ಖಾಸಗಿ ಕ್ಷೇತ್ರ ಸಹ ಹೆಚ್ಚು ಸಂಸ್ಕೃತಿಯ ಕಡೆ ಗಮನ ನೀಡುತ್ತಿದೆ. ರಚನಾತ್ಮಕ ಕಾರ್ಯಕ್ರಮಗಳನ್ನು ಯೋಜಿಸಿಕೊಂಡು ಖಾಸಗಿ ಉದ್ದಿಮೆದಾರರ ಬಳಿ ಹೋದಲ್ಲಿ ಖಂಡಿತ ಸಹಾಯ ದೊರಕುತ್ತದೆ. ಮತ್ತದೇ ಕ್ಯಾಂಪು, ಕಮ್ಮಟ ಎಂದರೆ ಯಾವ ಕಂಪೆನಿಯ ಉತ್ಸಾಹವೂ ಕುದುರುವುದಿಲ್ಲ. ಕಂಪೆನಿಗಳ ಬಳಿ ಹೋಗುವ ಮುನ್ನ ಅಕಾಡೆಮಿಯ Credibility ಹೆಚ್ಚಾಗಬೇಕು. 50ರ ದಶಕದಲ್ಲಿ ಯಾವುದೋ ಉದ್ದೇಶವಿಟ್ಟುಕೊಂಡು ಆರಂಭವಾದ ಕಾರ್ಯಕ್ರಮಗಳನ್ನೇ ನಾವು ಮತ್ತೆ ಮತ್ತೆ ನಡೆಸುತ್ತೀವಿ ಎನ್ನುವುದರಲ್ಲಿ ಅರ್ಥವಿಲ್ಲ. ಅಕಾಡೆಮಿ ಆರಂಭವಾದಾಗ ನಡೆಸುತ್ತಿದ್ದ ಎಷ್ಟೋ ಕಾರ್ಯಕ್ರಮಗಳನ್ನು ಇಂದು ಬೇರೆ ಸಂಸ್ಥೆಗಳು ಹಾಗೂ ಖಾಸಗಿ ಕ್ಷೇತ್ರ ಕೈಗೆತ್ತಿಕೊಂಡಿವೆ. ಹಾಗಾಗಿ ಇಂದು ಅಕಾಡೆಮಿಗಳಿಗೆ ಕಾಯಕಲ್ಪವಾಗಬೇಕು. ಅದು ಹೊಸದಾದ ಅನನ್ಯ ಕಾರ್ಯಕ್ಷೇತ್ರವನ್ನು ಗುರುತಿಸಿ ಅದರಲ್ಲಿ ತನ್ನನ್ನು ತೊಡಗಿಸಿಕೊಂಡಾಗ ಮಾತ್ರ ಅಕಾಡೆಮಿಗೆ ಮಹತ್ವ ಮರುಕಳಿಸೀತು.

*ಕೆ. ಟಿ. ಶಿವಪ್ರಸಾದ್*

◆ ಅಕಾಡೆಮಿಗಳು ಅನಗತ್ಯವಾಗಿ ಬೆಂಗಳೂರು/ನಗರ ಕೇಂದ್ರಿತವಾಗಿಬಿಟ್ಟಿವೆ. ಜನರ ಬಳಿಗೆ ಕಲೆಯನ್ನು ಕೊಂಡೊಯ್ಯುವುದು ಅಕಾಡೆಮಿಯ ಕೆಲಸ. ಭಾರತೀಯ ಕಲೆಯನ್ನು ಅಂತರ ರಾಷ್ಟ್ರೀಯ ಕಲಾವಲಯಕ್ಕೆ ಪರಿಚಯಿಸುವ ಯಾವುದೇ ದೊಡ್ಡ ಪ್ರಮಾಣದ ಯತ್ನ ಅಕಾಡೆಮಿಯಿಂದ ನಡೆದಿಲ್ಲ. ಇಲ್ಲಿಂದ ಹೊರದೇಶಗಳಿಗೆ ಹೋಗುವ ಪ್ರದರ್ಶನಗಳಲ್ಲಿ ಇನ್ನೂ ಒಳ್ಳೆಯ ಕಲಾಕೃತಿಗಳು

ಆಯ್ಕೆಯಾಗಬೇಕು. ಅಂತರ ರಾಷ್ಟ್ರೀಯ ಮಟ್ಟಕ್ಕಲ್ಲದಿದ್ದರೂ ನಮ್ಮ ಜಿಲ್ಲಾವಾರು /ಒಳ ಪ್ರದೇಶಗಳಿಗೆ ಕಲೆ ತಲುಪಿದೆಯೇ ಎಂದರೆ ಅದೂ ಇಲ್ಲ. ಬೆಂಗಳೂರು, ದೆಹಲಿಯಂತಹ ನಗರಗಳೇ ಎಲ್ಲ ಅವಕಾಶಗಳನ್ನೂ ಕಬಳಿಸುತ್ತವೆ.

◆ ಕಾರ್ಯಕ್ರಮಗಳಿಗೆ ಹಣವಿಲ್ಲ ಎಂಬುದು ಅಸಂಬದ್ಧ ಉತ್ತರ. ಹಣವನ್ನು ಉತ್ಪತ್ತಿ ಮಾಡುವ ಎಷ್ಟೋ ದಾರಿಗಳಿದ್ದಾವೆ. ಉದಾಹರಣೆಗೆ, ಅಕಾಡೆಮಿಯ ಸ್ವಂತ ಸಂಗ್ರಹದಲ್ಲಿ ನೂರಾರು ಒಳ್ಳೆಯ ಕೃತಿಗಳಿವೆ. ಅವುಗಳ ಗ್ರೀಟಿಂಗ್ ಕಾರ್ಡ್, ಕ್ಯಾಲೆಂಡರ್, ಪೋಸ್ಟರ್ ಇವುಗಳನ್ನು ಮಾಡಿ ಖಾಸಗಿ ಉದ್ದಿಮೆದಾರರಿಗೆ ಮಾರಬಹುದು. ಒಂದು ಸರ್ಕಾರಿ ಇಲಾಖೆ ಇಂಥ ಮಾರಾಟದ proposal ಕೊಟ್ಟಾಗ ಖಾಸಗಿ ಕಂಪೆನಿಗಳವರು ಇಲ್ಲ ಎನ್ನುವುದು ಕಷ್ಟವಾಗುತ್ತದೆ. ಅದನ್ನು ವ್ಯವಸ್ಥಿತವಾಗಿ ಮಾಡಬೇಕಷ್ಟೆ. ಹೀಗೆ ಹತ್ತು ಹಲವು ಮಾರ್ಗಗಳಿವೆ. ಆದರೆ ಅಧ್ಯಕ್ಷರಾದವರಿಗೆ ಇಂತಹ ವಹಿವಾಟು ನಡೆಸುವ ಚಾತುರ್ಯ ಇರಬೇಕಷ್ಟೇ. ಸಮಸ್ಯೆಯೆಂದರೆ ಹೆಚ್ಚಿನ ಕಲಾವಿದರು ಒಳ್ಳೆಯ administrators ಆಗಿರುವುದಿಲ್ಲ. ಹಾಗಾಗಿ ಅನೇಕ ತೊಂದರೆಗಳು ಉದ್ಭವಿಸುತ್ತವೆ. ಇದರಿಂದ ಅಧ್ಯಕ್ಷ ಪದಕ್ಕೆ ಆಯ್ಕೆ ಮಾಡುವಾಗ ಇದೆರೆಡೂ ಗುಣಗಳ ಸಮತೋಲನ ಇರುವಂತಹ ವ್ಯಕ್ತಿಯನ್ನು ಆರಿಸಬೇಕು.

### *ಯೂಸುಫ್ ಅರಕ್ಕಲ್*

◆ ಸ್ವಾತಂತ್ರ್ಯಾ ನಂತರದಲ್ಲಿ ನೆಹರುರವರ ಕಾಲದಲ್ಲಿ ಅಕಾಡೆಮಿಗಳು ರಚನೆಯಾದಾಗ ಭಾರತೀಯ ಸಾಂಪ್ರದಾಯಿಕ ಕಲೆಯನ್ನು ಕಾಪಾಡುವ ಹಾಗೂ ಸಮಕಾಲೀನ ಕಲೆಯನ್ನು ಹೊಸ ಎತ್ತರಕ್ಕೆ ಕೊಂಡೊಯ್ಯುವ ಸದುದ್ದೇಶವಿತ್ತು. ಹಲವಾರು ದಶಕಗಳ ತನಕ ಈ ಕಾರ್ಯ ಚೆನ್ನಾಗಿಯೇ ನಡೆಯಿತು. ದೇಶದ ಅತಿರಥ/ಮಹಾರಥರೆನ್ನುವಂತಹ ಕಲಾಕಾರರು ಅದರ ಚುಕ್ಕಾಣಿ ಹಿಡಿದು ನಡೆಸಿದರು. ನಮ್ಮ ಕರ್ನಾಟಕದಲ್ಲಿ ಅರಸುರವರ ಕಾಲದಲ್ಲಿ ಕೆ. ಕೆ. ಹೆಬ್ಬಾರ್‌ರವರನ್ನು ರಾಜ್ಯ ಲಲಿತಕಲಾ ಅಕಾಡೆಮಿ ಅಧ್ಯಕ್ಷರನ್ನಾಗಿ ಮಾಡಲಾಯಿತು. ಅವರು ನಮ್ಮ ರಾಜ್ಯದಲ್ಲಿ ನೆಲೆಸಿರಲಿಲ್ಲ, ಬೊಂಬಾಯಿಯಲ್ಲಿ ವಸತಿ ಹೂಡಿ ಬಹಳ ವರ್ಷಗಳೇ ಸಂದಿತ್ತು. ಆದರೆ ಅವರಿಗೆ ರಾಜ್ಯದ ಕಲೆಯನ್ನು ಪ್ರಗತಿಯತ್ತ ಸಾಗಿಸುವ ಒಂದು ದರ್ಶನವಿತ್ತು. ದೂರಾಲೋಚನೆ ಇತ್ತು. ಒಂದು ಹಾದಿಯಲ್ಲಿ ಅವರು ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡರು. ನಮ್ಮ ಲಲಿತಕಲಾ ಅಕಾಡೆಮಿಯ ಮಟ್ಟಕ್ಕೆ ಅವರು ಅಧ್ಯಕ್ಷರಾಗಿದ್ದ ಕಾಲವೇ ಸುವರ್ಣ ಯುಗ. ಆದಾದ ನಂತರ ಅವರ ಮಟ್ಟಕ್ಕೆ ತಲುಪುವ ಇನ್ನೊಬ್ಬರು ಬರಲಿಲ್ಲ. ಅವರು ಆಗ ಕೈಗೊಂಡ ಎಷ್ಟೋ ನಿರ್ಧಾರಗಳು ರಾಜ್ಯದ ಕಲೆಯ ದಿಕ್ಕನ್ನೇ ಬದಲಿಸಿದುವು. ಉದಾಹರಣೆಗೆ ಹೊರ ರಾಜ್ಯದ ಕಲಾ ಶಾಲೆಗಳಲ್ಲಿ ಮುಖ್ಯವಾಗಿ ಬರೋಡ, ಶಾಂತಿನಿಕೇತನ ಶಾಲೆಗಳಲ್ಲಿ ಅಭ್ಯಸಿಸಲು ಹೋಗುವವರಿಗೆ ವಿದ್ಯಾರ್ಥಿ ವೇತನದ ವ್ಯವಸ್ಥೆ. ನನಗನ್ನಿಸುವಂತೆ ವ್ಯವಸ್ಥೆಯಲ್ಲೇನೂ ಊನವಿಲ್ಲ. ಆದರೆ ಅದನ್ನು ನಡೆಸುವ ವ್ಯಕ್ತಿಗಳು ತಕ್ಕವರಾಗಿರಬೇಕಷ್ಟೆ.

◆ ಸರ್ಕಾರ ಅಕಾಡೆಮಿಗಳನ್ನು ರಚಿಸುವಾಗ ನಿಜಕ್ಕೂ ಅರ್ಹನಾದ ಒಳ್ಳೆಯ ಕಲಾವಿದ ಹಾಗೂ ಒಳ್ಳೆಯ administrator ಗುಣಗಳನ್ನು ಹೊಂದಿರುವ ವ್ಯಕ್ತಿಯನ್ನು ಅಧ್ಯಕ್ಷರನ್ನಾಗಿ ಮಾಡಿಬಿಟ್ಟು ಅಲ್ಲಿಗೆ ತನ್ನ ಪಾತ್ರವನ್ನು ನಿಲ್ಲಿಸಬೇಕು. ಸದಸ್ಯರನ್ನು ಆಯ್ದುಕೊಳ್ಳುವಾಗ ಯಾವುದೇ ರಾಜಕೀಯ ಒತ್ತಡ ಇರಬಾರದು. ಸದಸ್ಯರನ್ನು ನೇಮಿಸುವ ಸ್ವಾತಂತ್ರ್ಯ ಅಧ್ಯಕ್ಷನಿಗೆ ಇರಬೇಕು. ಸರ್ಕಾರ ಕಲಾಕ್ಷೇತ್ರದ ಪ್ರತಿಯೊಂದು ವಿಷಯದಲ್ಲೂ ಮೂಗು ತೂರಿಸದೆ ಅಕಾಡೆಮಿಯ ಸ್ವಾಯತ್ತತೆಯನ್ನು ಗೌರವಿಸಬೇಕು. ಇಂತಹ ವ್ಯಕ್ತಿಗಳಿಗೂ ನಮ್ಮ ರಾಜ್ಯದಲ್ಲಿ ಕೊರತೆಯಿಲ್ಲ.

◆ ಖಾಸಗಿ ಗ್ಯಾಲರಿಗಳು ಹೆಚ್ಚು ಹೆಚ್ಚಾಗಿ ಬಂದ ನಂತರ ಅಕಾಡೆಮಿಯ ಪ್ರಾಮುಖ್ಯತೆ ಬಹಳ ಕಮ್ಮಿಯಾಗಿದೆ. ಅದನ್ನು ಕೇಳುವವರೇ ಇಲ್ಲ. ಅದರ ಸದರಿ ಕಾರ್ಯಕ್ರಮಗಳು ಯಾವ ಘನ ಉದ್ದೇಶವನ್ನೂ ಪೂರೈಸುತ್ತಿಲ್ಲ. ಅಕಾಡೆಮಿಯ ಮುಖ್ಯ ಕೆಲಸ ಪ್ರತಿಭೆಯನ್ನು ಗುರುತಿಸಿ ಅದನ್ನು ಪೋಷಿಸುವಂತಹ ವಾತಾವರಣವನ್ನು ಒದಗಿಸಿಕೊಡುವುದು. ಕೇವಲ ವಾರ್ಷಿಕ ಪ್ರಕಟಣೆಯಿಂದ ಈ ಕೆಲಸವಾಗುವುದಿಲ್ಲ. ಇಷ್ಟು ವರ್ಷಗಳಿಂದ ಅಕಾಡೆಮಿ ನೂರಾರು ಕಲಾವಿದರಿಗೆ ಪ್ರಶಸ್ತಿ, ಸನ್ಮಾನಗಳನ್ನು ನೀಡಿದೆ. ಅವರಲ್ಲಿ ಎಷ್ಟು ಜನ ಗಂಭೀರವಾಗಿ ಕಲೆಯಲ್ಲಿ ತೊಡಗಿಕೊಂಡಿದ್ದಾರೆ ಎಂಬುದು ಸರ್ವವಿದಿತವಾದ್ದು. ಇನ್ನು ಪುಸ್ತಕಗಳ ಗುಣಮಟ್ಟ ತೀರ ಕಮ್ಮಿಯಾಗಿದೆ. ಹಣ ಕಮ್ಮಿ ಇದ್ದಲ್ಲಿ ಚೆನ್ನಾಗಿ ಮುದ್ರಿತವಾದ ಕೆಲವೇ ಪುಸ್ತಕಗಳು ಪ್ರಕಟವಾದರೆ ಸಾಕು. ಕಳಪೆಯಾದ ಒಂದು ಹೊರೆ ಪ್ರಕಟಿಸುವ ಅಗತ್ಯವಿಲ್ಲ. ಸರ್ಕಾರದಿಂದ ಈಗ ಅಕಾಡೆಮಿಗೆ ದೊರೆಯುತ್ತಿರುವ ಹಣ ಬಹಳ ಕಮ್ಮಿ, ಕನಿಷ್ಠಪಕ್ಷ ಒಂದು ಕೋಟಿ ಅನುದಾನವನ್ನು ವರ್ಷಕ್ಕೆ ಸರಕಾರ ನೀಡಬೇಕು. ಕರ್ನಾಟಕ ಸರ್ಕಾರಕ್ಕೆ ಒಂದು ಕೋಟಿ ಯಾವ ಮೂಲೆಗೆ.

◆ ಒಮ್ಮೊಮ್ಮೆ ಈ ಅಕಾಡೆಮಿಗಳನ್ನು ಖಾಸಗೀಕರಣ ಮಾಡಿ ಖಾಸಗಿ ಕ್ಷೇತ್ರಕ್ಕೆ ಒಪ್ಪಿಸಿ, ಗುತ್ತಿಗೆಗೆ ಬಿಟ್ಟುಕೊಡುವುದೇ ಒಳ್ಳೆಯದೆನಿಸುತ್ತದೆ. ಅವರು ಅಕಾಡೆಮಿಯಲ್ಲೂ ಲಾಭ ಮಾಡಿ ತೋರಿಸಿಯಾರು. ಕೊರತೆಯಿರುವುದು ಅವಕಾಶದಲ್ಲಲ್ಲ, ಅದರ ದರ್ಶನ ಮತ್ತು ನಿಷ್ಠೆಯಲ್ಲಿ. ಮೂರು ವರ್ಷಕ್ಕೆ ಒಂದು ಗುತ್ತಿಗೆದಾರನಿಗೆ ಎಂಬಂತೆ ಯಾಕೆ ಬಿಟ್ಟುಕೊಡಬಾರದು!

ಯಾವುದೇ ಸಂಸ್ಥೆ, ವಿಚಾರಧಾರೆಗೆ ಒಂದು ಕಾಲಾವಧಿ ಇರುತ್ತದೆ. ಅಕಾಡೆಮಿಯ ಅಡಿಪಾಯ ಸೋಷಿಯಲಿಸಮ್ಮಿನ ಎಲ್ಲವನ್ನು ಸರ್ಕಾರವೇ ನಡೆಸಬೇಕು ಎಂಬ ಆಶಯದಲ್ಲಿ. ಆದರೆ ಈ ವಿಚಾರ ಈಗ ಹಳೆಯದಾಗಿದೆ. ಅಕಾಡೆಮಿಗೆ ಯಾವುದೇ ಮಹತ್ವದ relevence ಉಳಿದಿಲ್ಲ. ಅಕಾಡೆಮಿ ತಾನು ಹುಟ್ಟಿದಾಗ ಹಾಕಿಕೊಂಡ ಹೆಚ್ಚಿನ ಕಾರ್ಯಕ್ರಮಗಳು ಮುಗಿದಾಗಿದೆ ಇನ್ನದರ ಅಗತ್ಯ ಇಲ್ಲ. ಸದ್ಯದ ರೂಪುರೇಷೆಯಲ್ಲಂತೂ ಖಂಡಿತ ಇಲ್ಲ. ಯಾವುದೇ ತೊಂದರೆ ಇಲ್ಲದೆ ಅಕಾಡೆಮಿಯನ್ನು ಮುಚ್ಚಿಬಿಡಬಹುದು. ಯಾವುದೇ ನಷ್ಟ ಇಲ್ಲ, ಅದು ತನ್ನ ಜೀವವನ್ನು ಕಳೆದುಕೊಂಡಿದೆ. ತೀರ ಆಗಲೇಬೇಕೆಂಬ ಕೆಲಸಗಳಿದ್ದರೆ ಅದನ್ನು ಸಂಸ್ಕೃತಿ ಇಲಾಖೆ ಮೌನವಾಗಿ /ನೇರವಾಗಿ ನಡೆಸಬಹುದು. ಈ ಜಂಬೂ ಸವಾರಿಯ ಅಗತ್ಯವಿಲ್ಲ.

●

*ಪದಗಳೊಂದೇ ನನ್ನದೆನ್ನುವ*
*ಒಡವೆ*
*ಪದಗಳೇ ನನ್ನ ಅರಿವೆ*
*ಪದವೇ ಅನ್ನ -ನನ್ನ ಬದುಕಿಗೆ*
*'ಪದ' ಸಂಪತ್ತು ಮಾತ್ರಾ*
*ನಾನು ಹಂಚುವೆ ಜನಗಳಿಗೆ*

*-ಸಂತ ತುಕಾರಾಂ*

# ಅಕಾಡೆಮಿ ಹೇಗಿರಬೇಕು?

■ ಜಿ. ಶ್ರೀನಿವಾಸಮೂರ್ತಿ

ಸಾಂಸ್ಕೃತಿಕ ಚಟುವಟಿಕೆಗಳ ಆಸ್ಥಾನ ಎಂಬಂತೆ ಹತ್ತಾರು ಅಕಾಡೆಮಿಗಳನ್ನು ಸರ್ಕಾರ ಹುಟ್ಟುಹಾಕಿದೆ. ಸರ್ಕಾರ ಬದಲಾದಾಗಲೆಲ್ಲ ಅಕಾಡೆಮಿಗಳಿಗೂ ಅಸ್ಥಿರತೆ. ಅಕಾಡೆಮಿ ರಚನೆ, ಅಲ್ಲಿ ಪ್ರಶಸ್ತಿ ಪ್ರದಾನ ಎಂದರೆ ಚೂಟಿಯಾದವರೆಲ್ಲ ಆತ್ಮಚರಿತೆ ಬರೆದುಕೊಂಡು ಅಥವ ಬರೆಸಿಕೊಂಡು ಅಲೆದಾಡುವುದು ಯಾವ ಸಂಸ್ಕೃತಿ?

ಹೀಗಾಗಬಾರದು ಎನ್ನುವುದಾದರೆ ಅಕಾಡೆಮಿ ರಚನೆ ಹೇಗಾಗಬೇಕು? ಅದರ ವ್ಯಾಪ್ತಿ ಎಷ್ಟಿರಬೇಕು? ಅದು ಸ್ವಾಯತ್ತವಾಗಿರಬೇಕಾದರೆ ಸರ್ಕಾರದೊಂದಿಗಿನ ಸಂಬಂಧ ಹೇಗಿರಬೇಕು? ಯೋಚಿಸಬೇಕಲ್ಲವೆ. ತುಮಕೂರಿನ 'ನಾಟಕ ಮನೆ' ಎಂಬ ಹೊಸ ಸಂಘಟನೆ ಇಂಥ ಚರ್ಚೆ ಒಂದನ್ನು ಮೇ 30ರಂದು ಶ್ರೀ ವಿ. ರಾಮಮೂರ್ತಿ ಅವರ ಅಧ್ಯಕ್ಷತೆಯಲ್ಲಿ ಇಟ್ಟುಕೊಂಡಿತ್ತು. ಅಲ್ಲಿ ಬಂದ ಮೌಲಿಕ ಅಭಿಪ್ರಾಯಗಳನ್ನು ಇಲ್ಲಿ ಪ್ರಸ್ತಾಪಿಸುತ್ತಿದ್ದೇನೆ.

I. ವಿಶ್ವವಿದ್ಯಾಲಯದಂತಹ ಸ್ವಾಯತ್ತ ಸಂಸ್ಥೆಗಳಿಗೆ ಕುಲಪತಿಗಳನ್ನು ಆರಿಸುವಾಗ ಅಥವ ಜ್ಞಾನಪೀಠ ಪ್ರಶಸ್ತಿಗೆ ಹೆಸರು ಆಯ್ಕೆ ಮಾಡುವಾಗ ಅನುಸರಿಸುವ ವಿಧಾನವನ್ನು ಅಕಾಡೆಮಿ ರಚನೆಯಲ್ಲಿ ಅನುಸರಿಸುವುದು ಯೋಗ್ಯ. ಎಂದರೆ :

(1) ಪ್ರತಿಷ್ಠಿತ ವ್ಯಕ್ತಿಗಳು ಹಾಗೂ ಸಂಘ ಸಂಸ್ಥೆಗಳು ವಿವಿಧ ಅಕಾಡೆಮಿಗಳಿಗೆ ಅಧ್ಯಕ್ಷರಾಗಬಹುದಾದವರ ಹೆಸರುಗಳನ್ನು ಮೊದಲು ಸೂಚಿಸುವುದು.

(2) ಆಯಾ ಕ್ಷೇತ್ರದಲ್ಲಿ ಈಗಾಗಲೆ ನಿಷ್ಣಾತರೂ ಗಣ್ಯರು ಆದವರ ಆಯ್ಕೆ ಸಮಿತಿಯೊಂದನ್ನು ರಚಿಸಿ ವಿವಿಧ ಸಂಘಗಳೂ ವ್ಯಕ್ತಿಗಳಿಂದ ಬಂದ ಹೆಸರುಗಳಿಂದ ಯೋಗ್ಯರಾದವರ ಹೆಸರ ಚಿಕ್ಕ ಪಟ್ಟಿಯನ್ನು ತಯಾರಿಸುವುದು.

(3) ಸಂಬಂಧಪಟ್ಟ ಮಂತ್ರಿಗಳು ಅಧಿಕಾರಿಗಳೂ ಮತ್ತು ತಜ್ಞರು ಸೇರಿದ ಸಭೆಯಲ್ಲಿ ಮುಕ್ತವಾದ ಚರ್ಚೆಯ ಮೂಲಕ ಅಧ್ಯಕ್ಷರನ್ನು ಆಯ್ಕೆ ಮಾಡುವುದು

(4) ಅಧ್ಯಕ್ಷರ ಮತ್ತು ತಜ್ಞರ ಸಭೆಯಲ್ಲಿ ಸದಸ್ಯರನ್ನು ಆಯ್ಕೆ ಮಾಡುವುದು



(5) ಸದಸ್ಯರ ಆಯ್ಕೆ ಆಯಾ ಕಾಲಪ್ರಕಾರದ ವಿವಿಧ ಅಂಗಗಳಿಗೆ, ಆಯಾಮಗಳಿಗೆ ಪ್ರಾತಿನಿಧ್ಯ ಕೊಡುವುದು ಜಿಲ್ಲಾವಾರು, ಜಾತಿವಾರು, ಕೋಮುವಾರು ಪ್ರಾತಿನಿಧ್ಯಕ್ಕಿಂತ ಮುಖ್ಯವಾಗಿರಬೇಕು.

II. ಅಕಾಡೆಮಿ ರಚನೆಯಾದ ಕೂಡಲೆ ತನ್ನ ಕಾಲಾವಧಿಯ ಕೆಲಸದ ಸ್ಪಷ್ಟ ಚಿತ್ರಣ ರೂಪಿಸಿಕೊಳ್ಳಬೇಕು. ಕನ್ನಡ ಸಂಸ್ಕೃತಿ ಇಲಾಖೆ ಸ್ವಂತವಾಗಿ ಎಲ್ಲ ಅಕಾಡೆಮಿಗಳಿಗಿಂತ ಹೆಚ್ಚಿನ ಹಣವನ್ನು ವಿಲೇವಾರಿ ಮಾಡುವ ಅಧಿಕಾರ ಪಡೆದಿದ್ದು ಆ ಇಲಾಖೆಯ ಅಧಿಕಾರಿ ಆಪಾತತಃ ಎಲ್ಲ ಅಕಾಡೆಮಿ ಅಧ್ಯಕ್ಷರನ್ನು ಮೀರಿಸಿದ ವ್ಯಕ್ತಿ ಆಗಿರುವುದು ವಿಪರ್ಯಾಸ. ಇದನ್ನು ಸರಿಪಡಿಸಿಕೊಳ್ಳಬೇಕು. ಎಂದರೆ ಸಂಸ್ಕೃತಿ ಇಲಾಖೆ ತಾನು ನೀಡುವ ಅನುದಾನ, ಪ್ರೋತ್ಸಾಹ ಇತ್ಯಾದಿಗಳನ್ನು ಆಯಾ ಅಕಾಡೆಮಿಗಳ ಮುಖಾಂತರ ನೀಡುವುದು ಸೂಕ್ತ. ಪ್ರತಿ ಜಿಲ್ಲೆಯಲ್ಲಿರುವ ಸಂಸ್ಕೃತಿ ಇಲಾಖೆಯ ಪೂರ್ಣ ಸದುಪಯೋಗವನ್ನು ಅಕಾಡೆಮಿಗಳು ಪಡೆದುಕೊಳ್ಳುವಂತಾಗಬೇಕು.

III. ಅಕಾಡೆಮಿಗಳು ಕೇವಲ ಪ್ರಶಸ್ತಿ ನೀಡುವ, ಧನಸಹಾಯ ಮಾಡುವ ಕೇಂದ್ರವಾಗದೆ ಅದರ ಮೂಲಾರ್ಥದ ಅಧ್ಯಯನಪರತೆ, ಉಳಿಸಿಕೊಳ್ಳಬೇಕು, ಅಲ್ಲದೆ ಆಯಾ ಅಕಾಡೆಮಿಗಳಲ್ಲಿ ಸಂಬಂಧಿಸಿದ ವ್ಯಕ್ತಿಗಳ, ಸಂಘಟನೆ ಸಂಸ್ಥೆಗಳ ಮಾಹಿತಿ ಇರಬೇಕು. ಸ್ಥಳೀಯ ಸಂಸ್ಥೆಗಳಿಗೂ ಹೊರಗಿನ ಸಂಸ್ಥೆಗಳಿಗೂ (ಅವು ಕಲಾ ಸಂಸ್ಥೆಗಳಿರಬಹುದು ದತ್ತಿ ನೀಡುವ, ಸಹಾಯ ಮಾಡುವ ಸಂಸ್ಥೆಗಳಿರಬಹುದು) ಹಾಗೂ ಸರ್ಕಾರಿ ಯಂತ್ರಕ್ಕೂ ನಡುವಿನ ಕೊಂಡಿಯಾಗಿ ಅಕಾಡೆಮಿ ಕೆಲಸ ಮಾಡಬೇಕು. ಉದಾಹರಣೆಗೆ ಯಾವುದೋ ಉತ್ತಮ ಸಂಸ್ಥೆ ಒಂದು ಯೋಜನೆ ಹಾಕಿಕೊಂಡು ಅಕಾಡೆಮಿಯಲ್ಲಿ ಸಹಾಯ ಕೇಳಿದರೆ ಖುದ್ದು ಸಹಾಯ ಮಾಡಲಾಗದಿದ್ದರೂ ಎಲ್ಲಿಂದ ಹೇಗೆ ಸಹಾಯ ಪಡೆಯಬಹುದೆಂಬ ಮಾರ್ಗದರ್ಶನ ಸಿಗಬೇಕು. ಇದಕ್ಕಾಗಿ ಅಕಾಡೆಮಿಗಳು ಮಾಹಿತಿ ಕೇಂದ್ರಗಳಾಗುವುದು ಅನಿವಾರ್ಯ. ಮಾಹಿತಿ ತಂತ್ರಜ್ಞಾನದ ಬಳಕೆ ಬರೀ ರಫ್ತಿನ ಸರಕಾಗದಿರಲಿ.

IV. ಅಕಾಡೆಮಿ ಸದಸ್ಯರನೇಕರು ಯಾವ ಜವಾಬ್ದಾರಿ ಇಲ್ಲದೆ ಕೆಲವೊಮ್ಮೆ ಎಲ್ಲ ಜವಾಬ್ದಾರಿ ನಿರ್ವಹಿಸುತ್ತಾ ಪಾರ್ಟಿಗಳನ್ನು ಸೃಷ್ಟಿಸುತ್ತಿದ್ದಾರೆ. ಆದ್ದರಿಂದ ಪ್ರತಿ ಅಕಾಡೆಮಿಯ ಪ್ರತಿಯೊಬ್ಬ ಸದಸ್ಯರಿಗೆ ಅವರ ಜವಾಬ್ದಾರಿಗಳನ್ನು ಗೊತ್ತುಪಡಿಸಬೇಕು. ಯಾವುದಕ್ಕೂ ಅಸಮರ್ಥರಾದವರನ್ನು ಸದಸ್ಯತ್ವದಿಂದ ತೆಗೆದುಹಾಕಬೇಕು. ಪ್ರತಿಭಾವಂತರೂ ಕ್ರಿಯಾಶೀಲರೂ ಆದವರಲ್ಲಿ ಅನಾರೋಗ್ಯಕರ ಸ್ಪರ್ಧೆ ತಪ್ಪಿಸಲು ಒಮ್ಮೆ ಒಂದು ಅಕಾಡೆಮಿ ಸದಸ್ಯರಾದವರನ್ನು ಮತ್ತೆ ಅಕಾಡೆಮಿ ಸದಸ್ಯರನ್ನಾಗಿ ಮಾಡಬಾರದು.

V. ಅಕಾಡೆಮಿ ಕಾರ್ಯಯೋಜನೆ ವಿಶ್ವವಿದ್ಯಾಲಯ ಮತ್ತು ಅನ್ಯ ಸಂಸ್ಥೆಗಳಲ್ಲಿನ ಕೆಲಸದ ಪುನರಾವರ್ತನೆಯಾಗಬಾರದು. ಬದಲಿಗೆ ಬೇರೆ ಸಂಸ್ಥೆಗಳ ಕೆಲಸವನ್ನು ಒಗ್ಗೂಡಿಸುವ ಮತ್ತು ಹೊಸ ವಿಧಿ ವಿಧಾನಗಳಿಗೆ ಇಂಬು ಕೊಡುವ ಯೋಜನೆಗಳನ್ನು ಹಾಕಿಕೊಳ್ಳಬೇಕು.

ಸಂಸ್ಕೃತಿಯನ್ನು ಗಂಭೀರವಾಗಿ ತೆಗೆದುಕೊಳ್ಳುವವರು ಈ ಬಗ್ಗೆ ವಿಚಾರ ನಡೆಸಿ ಜನಾಭಿಪ್ರಾಯ ಮೂಡಿಸಬೇಕು.

●

# ಪ್ರಜಾಪ್ರಭುತ್ವ ಮತ್ತು ಆತ್ಮಸಾಕ್ಷಿಗಳ ನಡುವೆ

*ಡಾ. ಎಚ್. ಎಸ್. ರಾಘವೇಂದ್ರರಾವ್*

ಸರ್ಕಾರ, ಸಂಸ್ಕೃತಿ ಮತ್ತು ಕಲಾವಿದರ ನಡುವಿನ ಸಂಬಂಧವು ಬಹಳ ಸೂಕ್ಷ್ಮವಾದದು. ಎಲ್ಲ ಕಾಲದಲ್ಲಿಯೂ ಅಷ್ಟೇ. ಸರ್ಕಾರ ಎಂದರೆ ನಿರ್ದಿಷ್ಟ ಆಡಳಿತ ಪಕ್ಷ ಅಥವಾ ರಾಜಕೀಯ ಅಜೆಂಡಾ ಆಗಿರುವುದರ ಜೊತೆಗೆ, ಹೆಚ್ಚು ಶಾಶ್ವತವಾದ ನೆಲೆಯಲ್ಲಿ ಪ್ರಜಾಪ್ರಭುತ್ವದಲ್ಲಿ ಅನಿವಾರ್ಯವಾದ ಒಂದು ಉಪಕರಣವೂ ಆಗಿದೆ. ಇದು ಹೂಡಬಹುದಾದ ಸಂಪನ್ಮೂಲಗಳಿಗೆ ಇರುವ "ಸಾರ್ವಜನಿಕತನ"ವು, ಇದಕ್ಕೆ ಪರ್ಯಾಯವಾದ ಖಾಸಗೀ ಬಂಡವಾಳಕ್ಕೆ ಇರುವುದಿಲ್ಲ. ಸ್ವಯಂ ಆಸಕ್ತಿಯಿಂದ ಸಾರ್ವಜನಿಕರ ಮೂಲಕ ಸಂಗ್ರಹಿಸಬಹುದಾದ ಸಂಪನ್ಮೂಲಗಳಿಗೆ ಒಂದು ಮಿತಿಯಿದೆ. ಮಾರುಕಟ್ಟೆಯ ನಿಯಮಗಳಿಗೆ ಅನುಗುಣವಾಗಿ ಕಲೆಗಳು ಉಳಿಯಲಿ ಅಥವಾ ಅಳಿಯಲಿ ಎನ್ನುವುದಾದರೆ, ಅಭಿರುಚಿ ನಿರ್ಮಾಣದ ವಿಧಾನ ಹಾಗೂ ಉಪಕರಣಗಳ ಬಗ್ಗೆ ಮರುಚಿಂತನೆ ನಡೆಸಬೇಕಾಗುತ್ತದೆ. ಇಂದು ಈ ನಿಯಮಗಳಿಗೆ ಅನುಗುಣವಾಗಿ ವಿಜೃಂಭಿಸುತ್ತಿರುವ ಕ್ರಿಕೆಟ್ ಮತ್ತು ಹಿಂದೀ ಸಿನಿಮಾಗಳನ್ನು ಗಮನಿಸಿದರೆ ನನ್ನ ಮಾತು ಸ್ಪಷ್ಟವಾಗುತ್ತದೆ. ಒಟ್ಟು ಸಮಾಜದಲ್ಲಿ, ಹಿಂದುಳಿದಿರುವ ಹಾಗೂ ಅ-ವ್ಯವಸ್ಥಿತವಾದ (ಅನ್-ಆರ್ಗನೈಸ್ಡ್) ವಲಯಗಳಿಗೆ ಕುಮ್ಮಕ್ಕು ದೊರೆಯುವುದು ಈ ಸರ್ಕಾರೀ ವಲಯದಿಂದಲೇ ಆಗಿದೆ. ಇಂಥ ವಲಯಗಳ ಕೆಲವು ಮುಖಂಡರು ಉಳಿದವರ ಹಾಗೆಯೇ, ತಮಗೆ ದೊರೆಯುವ ಸವಲತ್ತುಗಳನ್ನು ದುರುಪಯೋಗ ಮಾಡಿಕೊಳ್ಳುವ ಅಪಾಯಸಂಭವವನ್ನು ಗಮನಿಸಿದಾಗಲೂ ಈ ಮಾತು ಸುಳ್ಳಾಗುವುದಿಲ್ಲ. ಸಾರ್ವಜನಿಕ ಶಿಕ್ಷಣ, ಸಮಾಜಕಲ್ಯಾಣ ಮುಂತಾದ ವಲಯಗಳೂ ಪರೋಕ್ಷವಾಗಿ ಎಚ್ಚರ ಮೂಡಿಸುವ ಕೆಲಸವನ್ನೇ ಮಾಡುತ್ತಿರುತ್ತವೆ. ಖಾಸಗೀ ವಲಯದಲ್ಲಿ ನಡೆಯುವ ವ್ಯಕ್ತಿಕೇಂದ್ರಿತ ಹಾಗೂ ವ್ಯಕ್ತಿಪೂಜಕ ಪ್ರಯತ್ನಗಳನ್ನೂ ಅವುಗಳ ಗುಣ ಹಾಗೂ ಪರಿಮಿತಿ ನೆಲೆಯಲ್ಲಿಯೇ ನೋಡಬೇಕು. ಅಂತಹ ಪ್ರಯತ್ನಗಳಿಗೆ ವರ್ಗ-ವರ್ಣಗಳ ನೆಲೆಗಟ್ಟು ಇರುವುದೇ ಇಲ್ಲವೆಂದು ತಿಳಿಯುವುದು ಹುಸಿ. ಹೀಗಾದಾಗ, ಸಂಪೂರ್ಣವಾಗಿ ಎಲ್ಲ ವ್ಯವಸ್ಥೆಯಿಂದ ಹೊರಗೆ ಉಳಿದು ರಾಜಕೀಯ - ಸಾಮಾಜಿಕ ಪರಿವರ್ತನೆಗಾಗಿ ದುಡಿಯುವುದು ಒಂದು ಸಾಧ್ಯತೆ. ಇಲ್ಲಿ ಸಾಂಸ್ಕೃತಿಕ ಚಟುವಟಿಕೆಯೆನ್ನುವುದು ಉಪ ಉತ್ಪನ್ನವೇ ವಿನಾ ಮೂಲ ನೆಲೆಯಲ್ಲ. ಇಂಥ ಸನ್ನಿವೇಶದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಮತ್ತು ಕ್ರಿಯಾ ಸ್ವಾತಂತ್ರ್ಯವನ್ನು ಕಾಪಾಡಿಕೊಂಡೇ ವ್ಯವಸ್ಥೆಯೊಳಗೆ ಕೆಲಸ ಮಾಡುವುದು ತಂತಿನಡಿಗೆ. ಪ್ರಜಾಪ್ರಭುತ್ವದಲ್ಲಿ ಪ್ರತಿಭಟನೆಯಂತೆಯೇ ಮನ ಒಲಿಸುವಿಕೆಗೂ ಸ್ಥಾನವಿದೆ.



ಹೀಗಾದಾಗ, "ಬುದ್ಧಿಜೀವಿಗಳ" ನಿಲುವು ಹೇಗಿರಬೇಕು ಎನ್ನುವುದು ಕುತೂಹಲಕರ. ವ್ಯವಸ್ಥೆಯಿಂದ ಸಂಪೂರ್ಣವಾಗಿ ಹೊರಗೆ ಉಳಿದು, ವಿಮರ್ಶಕ ದೂರವನ್ನು ಕಾಪಾಡಿಕೊಂಡು, ಸಮಾನಮನಸ್ಕರೊಂದಿಗೆ ಸಾಧ್ಯವಾದಷ್ಟು ಫ್ರೀ-ಲಾನ್ಸ್ ಕೆಲಸ ಮಾಡುವುದು ಒಂದು ಮಾರ್ಗ. ಇಷ್ಟನ್ನು ಮಾಡಲು ಯಾರೂ ಯಾವಾಗಲೂ ಅಡ್ಡಿ ಬರಲಾರರು. ಇದರ ಜೊತೆಗೆ, ಸರ್ಕಾರದ ಸಾಂಸ್ಥಿಕ ಚೌಕಟ್ಟಿನಲ್ಲಿ, ಸ್ವಾರ್ಥವಿಲ್ಲದ ನೆರವು ಹಾಗೂ ಮಾರ್ಗದರ್ಶನಗಳನ್ನು ನೀಡುವುದು ಸಾಧ್ಯವಿದೆ. ಇಲ್ಲಿ ಬೌದ್ಧಿಕ ಅಹಂಕಾರಕ್ಕಿಂತ ಮನ ಒಲಿಸುವ ವಿನಯ ಮತ್ತು ತಾಳ್ಮೆಗಳು ಮುಖ್ಯ. ಕೈ ಕೊಳೆಯಾದರೂ ಪರವಾಗಿಲ್ಲ ಎನ್ನುವ ನಿಲುವು ಹೇಗೆ ತಪ್ಪೋ, ಹಾಗೆಯೇ ಅಲ್ಲಿ ಹೋದರೆ, ಇದ್ದರೆ ಕೈ ಕೊಳೆಯಾಗುತ್ತದೆ ಎನ್ನುವ ತೀರ್ಮಾನ ಕೂಡ ಸರಿಯಲ್ಲ.

ಅಕಾಡೆಮಿಯಂತಹ ಸಂಸ್ಥೆಗಳು ಸಹಜವಾಗಿಯೇ ಹಲವು ಹಿತಾಸಕ್ತಿಗಳ ಕೂಡುಕೂಟ. ವೈಯಕ್ತಿಕ ನೆಲೆಯ ಕ್ಷುಲ್ಲಕ ಮಹತ್ವಾಕಾಂಕ್ಷೆಗಳನ್ನು ಹೊರತುಪಡಿಸಿದಾಗ, ಇವು ಪ್ರಾಮಾಣಿಕವಾಗಿಯೇ ಇರಬಹುದು. ಹೈದರಾಬಾದ್ ಕರ್ನಾಟಕ, ಮಹಿಳೆಯರು, ದಲಿತರು, ಮಕ್ಕಳಸಾಹಿತ್ಯ ಮುಂತಾದ ನೆಲೆಗಳನ್ನು ಅ-ಸಾಂಸ್ಕೃತಿಕ, ಅ-ಸಾಹಿತ್ಯಕ ಎಂದು ತಳ್ಳಿಹಾಕುವುದು ಸರಿಯಲ್ಲ. ಆ ಪ್ರೆಷರ್ ಗ್ರೂಪ್‌ಗಳನ್ನು ಸ್ವಂತಕ್ಕೆ ಲಾಭಕ್ಕಾಗಿ ಬಳಸಿಕೊಳ್ಳುವ ವ್ಯಕ್ತಿಗಳನ್ನು ಖಂಡಿಸುತ್ತಲೇ ಅವರ ವಾದಗಳ ಹಿಂದೆ ಇರಬಹುದಾದ ತಾತ್ವಿಕತೆಯನ್ನು, ತರ್ಕವನ್ನು ಗುರುತಿಸಬೇಕಾಗುತ್ತದೆ. ಕೆಲವು ಬಾರಿ, ಅಗತ್ಯವಾದುದನ್ನು ನಿರಾಕರಿಸಿ ಅನಗತ್ಯವಾದುದಕ್ಕೆ ದುಂಬಾಲು ಬೀಳುವ ಮಗುವನ್ನು ಮನ ಒಲಿಸಿದಂತೆ, ತಪ್ಪು ನಿಲುವುಗಳನ್ನು ಸರಿಪಡಿಸಬೇಕಾಗಬಹುದು. ಪೇಟ್ರನೈಸಿಂಗ್ ಆದ ಅಹಂಕಾರದಿಂದ ಅಲ್ಲ, ಪ್ರಾಮಾಣಿಕವಾದ ಪ್ರೀತಿಯಿಂದ.

ಒಂದೇ ಒಂದು ಉದ್ದೇಶದಿಂದ ಸ್ಥಾಪಿತವಾಗಿರುವ ಗುಂಪಿನಲ್ಲಿ, ಏಕರೂಪತೆ ಇರುತ್ತದೆ. ಅದಕ್ಕೆ ಹೆಚ್ಚಿನ ಫೋಕಸ್ ಸಾಧ್ಯ. ಹಲವು ಗುರಿಗಳಿರುವ ಕಡೆ, ಸಮತೋಲನವು ಅನಿವಾರ್ಯ. ಯಾವುದು ಯಾವುದಕ್ಕಿಂತ ಹೇಗೆ, ಎಷ್ಟು ಮುಖ್ಯ ಎನ್ನುವ ಸಂಗತಿಯು ಸದಾ ಚರ್ಚೆಗೆ ಒಳಗಾಗುತ್ತಿರುತ್ತದೆ. ಸೀಮಿತ ಸಂಪನ್ಮೂಲಗಳ ಹಂಚಿಕೆಯು ಸಹಜವಾಗಿಯೇ "ಬೋನ್ ಆಫ್ ಕಂಟೆನ್ಶನ್" ಆಗಿಬಿಡುತ್ತದೆ. ಯಾರಿಗೂ ಸಂಪೂರ್ಣವಾಗಿ ಸಮಧಾನ ನೀಡದ, ಆದರೆ "ರಾಜಿ ಕಬೂಲಿ" ಅಲ್ಲದ ತೀರ್ಮಾನಗಳು ಅನಿವಾರ್ಯವಾಗುತ್ತದೆ.

ಅಕಾಡೆಮಿಗಳು ತಮಗೆ ಮೊದಲಿನಿಂದ ದತ್ತವಾಗಿರುವ ಬಹುಮಾನ ವಿತರಣೆ, ಪ್ರಶಸ್ತಿಪ್ರದಾನ ಮುಂತಾದ ವಾರ್ಷಿಕ ಆಚರಣೆಗಳ ಆಚೆಗೂ ಗಮನಹರಿಸಿ, ಹೆಚ್ಚು ಶಾಶ್ವತವಾದ ಪರಿಣಾಮ ಬೀರುವ ಕೆಲಸಗಳನ್ನು ಮಾಡಬೇಕಾಗುತ್ತದೆ. ಶಿಕ್ಷಣ ವ್ಯವಸ್ಥೆಯು ಸಂಸ್ಕೃತಿ ರಕ್ಷಣೆಯ ಹೊಣೆಯನ್ನು ಕಡೆಗಣ್ಣಿನಿಂದ ನೋಡುತ್ತಿರುವ ಈ ದಿನಗಳಲ್ಲಿ, ಅಂಥ ಕೆಲಸದ ಪರ್ಯಾಯ ಕೇಂದ್ರಗಳಾಗಿ ಅಕಾಡೆಮಿಗಳು ರೂಪುಗೊಳ್ಳಬಹುದು. ಹೆಚ್ಚುಕಡಿಮೆ ನಿಂತೇಹೋಗಿರುವ, ವಿಶ್ವವಿದ್ಯಾಲಯಗಳ ಪ್ರಚಾರೋಪನ್ಯಾಸಗಳ ಜೊತೆಯಲ್ಲಿ ನಮ್ಮ ವಿಚಾರಸಂಕಿರಣಗಳು, ಕಮ್ಮಟಗಳು ಮತ್ತು ಸಂಸ್ಕೃತಿ ಶಿಬಿರಗಳನ್ನು ಹೋಲಿಸಿದಾಗ, ನನ್ನ ಮಾತು ಸ್ಪಷ್ಟವಾಗುತ್ತದೆ. ಅಕಾಡೆಮಿಗಳು ಗತಕಾಲದ ಹಿರಿಯರ ಸಾಧನೆಗಳ ಸ್ಮರಣೆ, ವೈಭವೀಕರಣಗಳಿಗಿಂತ ಹೆಚ್ಚಾಗಿ ಸಮಕಾಲೀನ ಅಗತ್ಯಗಳಿಗೆ ಸ್ಪಂದಿಸುವುದು, ಯುವ ಜನಾಂಗದೊಂದಿಗೆ ಸಂಪರ್ಕವಿಟ್ಟುಕೊಳ್ಳುವುದು ಮುಖ್ಯವಾಗುತ್ತದೆ. ಸಾರ್ವಜನಿಕ ಜೀವನದ ಆಗುಹೋಗುಗಳಿಗೆ ಪ್ರತಿಕ್ರಿಯಾತ್ಮಕವಾಗಿ, ಭಾವುಕವಾಗಿ ಅಲ್ಲದಿದ್ದರೂ, ಹೆಚ್ಚು ಅಕಡೆಮಿಕ್ ಆಗಿ ಶಾಶ್ವತವಾಗಿ ಸ್ಪಂದಿಸಲು ಸಾಧ್ಯವಿದೆ. ಅಕಾಡೆಮಿಗಳಲ್ಲಿ ಕೂಡ ಒಟ್ಟು ಸಾರ್ವಜನಿಕ ಜೀವನದ ಪಡಿನೆಳಲು ಇರುವುದೇ ಸಹಜ. ಅವು ಪವಿತ್ರತೆಯ, ಶ್ರೇಷ್ಠತೆಯ ದ್ವೀಪಗಳೆಂಬ ಹುಸಿನಿರೀಕ್ಷೆಗಳನ್ನು ಬದಿಗಿಟ್ಟು ಅವುಗಳ ಕೆಲಸವನ್ನು ಗಮನಿಸಬೇಕಾಗುತ್ತದೆ.

# ಕೊಟ್ಟ ಕುದುರೆ......

ಚಿ. ಶ್ರೀನಿವಾಸರಾಜು

ನಾವು ಅಕಾಡೆಮಿಗಳು ಬೇಡ; ಕನ್ನಡ ಸಾಹಿತ್ಯ ಪರಿಷತ್ ಬೇಡ; ಅವುಗಳ ಆಯುಷ್ಯ ಮುಗಿಯಿತು ಎಂದು ಹೇಳುವುದು ಸುಲಭ. ಹೇಳುವವರಿಗೆ, ಕೇಳುವವರಿಗೆ ಆಪ್ಯಾಯಮಾನವಾಗಿರುತ್ತದೆ. ಪ್ರತಿಭಟನೆಯ ಪಂಜಿನಲ್ಲಿ ನಮ್ಮ ಮುಖ ಚೆನ್ನಾಗಿ ಕಾಣುತ್ತದೆ. ನಂತರ ಪ್ರತಿಭಟನೆಯೇ ಒಂದು ಸಂಸ್ಥೆಯಾಗುತ್ತದೆ. ನಾವು ಏನೇ ಹೇಳಿದರೂ ಅವು ಇದ್ದೇ ಇರುತ್ತವೆ. ಅವುಗಳಿಂದ ಒಳ್ಳೆಯ ಕೆಲಸ ಮಾಡಿಸುವುದರ ಕಡೆಗೆ ನಮ್ಮ ಗಮನ ಹರಿಸಬೇಕು. ನಮ್ಮ ದೇಶದ ಪ್ರಗತಿಗೆ ಮಾರಕವಾಗಿರುವ ಜಾತಿ, ಪ್ರಭಾವ ಮತ್ತು ಹಣ ಇಲ್ಲೂ ರುದ್ರ ನರ್ತನ ಮಾಡುತ್ತಿದೆ. ಇವುಗಳ ಒತ್ತಡ ಹೆಚ್ಚದಂತೆ ನೋಡಿಕೊಳ್ಳಬೇಕು.

ಅಕಾಡೆಮಿಗಳು, ಸಂಘ-ಸಂಸ್ಥೆಗಳಿಂದ ಸಾಹಿತಿಯಾಗಲಿ, ಸಾಹಿತ್ಯವಾಗಿ ಮೂಡಿಬರುವುದಿಲ್ಲ. ಮೂಡಿಬಂದ ಸಾಹಿತ್ಯಕ್ಕೆ ಒಳ್ಳೆಯ ವಾತಾವರಣವನ್ನು ಕಲ್ಪಿಸುವುದು ಇವುಗಳ ಆದ್ಯಕರ್ತವ್ಯವಾಗಬೇಕು. ಇಲ್ಲಿನ ಜನ ಸ್ವಾರ್ಥ ಮತ್ತು ಪ್ರದರ್ಶನ ಚಟಕ್ಕೆ ಬಲಿಯಾಗಬಾರದು. ಅಧ್ಯಕ್ಷರು ಮತ್ತು ಸದಸ್ಯರು ಏನು ಮಾಡಬೇಕು, ಏನು ಮಾಡಬಾರದು ಎಂದು ನೀತಿ ಸಂಹಿತೆಯನ್ನು ಪಟ್ಟಿ ಮಾಡುವುದು ಸುಲಭ, ಏಕೆಂದರೆ ಕೇವಲ ಅಕಾಡೆಮಿಗಳು ಮತ್ತು ಪರಿಷತ್ತು ಮಾತ್ರ ನರಳುತ್ತಿಲ್ಲ. ನಮ್ಮ ಸುತ್ತಲ ಸಮಾಜದ ಎಲ್ಲ ರಂಗಗಳು ಕೊಳೆಯುತ್ತಿವೆ, ನರಳುತ್ತಿವೆ. ಇಂತಹ ಸಂದರ್ಭಗಳಲ್ಲಿ ಉನ್ನತ ಅಧಿಕಾರ ಹೊಂದಿದವರು, ಸಂಸ್ಕೃತಿಯನ್ನು ಪ್ರೀತಿಸುವವರು ದೊಡ್ಡ ಶಸ್ತ್ರಚಿಕಿತ್ಸೆಯನ್ನು ಮಾಡಬೇಕು. ನಾಡು ನುಡಿಯನ್ನು ಉಳಿಸಬೇಕು.



ಈ ಸಂಸ್ಥೆಗಳು ಮಾಡುತ್ತಿರುವ ಜಳ್ಳು ಕೆಲಸಗಳನ್ನು ನಿಲ್ಲಿಸಬೇಕು. ಯುವಜನತೆಗೆ ಅವಶ್ಯಕವಾದ, ಇಂದಿನ ವಾತಾವರಣಗಳ ಅಗತ್ಯವಾದ ಕ್ರಿಯಾತ್ಮಕ ಸೃಜನಶೀಲ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. ಕನ್ನಡವನ್ನು ಕನ್ನಡ ನಾಡಿನಲ್ಲಿ ಜೀವಂತ ಭಾಷೆಯನ್ನಾಗಿ ಮಾಡುವ ಚಳುವಳಿ ಬೇರೆ; ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸುವ ಚಳುವಳಿ ಬೇರೆ. ಎರಡನ್ನು ಒಂದೇ ಎಂದು ಭಾವಿಸುವುದರಿಂದ ಅನೇಕ ಗೊಂದಲ ಗಳಿಗೆ, ಆತಂಕಗಳಿಗೆ ಎಡೆಮಾಡಿಕೊಡುತ್ತದೆ.

ಅಕಾಡೆಮಿಗಳಾಗಲಿ, ಸಾಹಿತ್ಯ ಪರಿಷತ್ ಆಗಲಿ ತಮ್ಮ ಮಿತಿಗಳನ್ನು ಮೊದಲು ಗುರುತು ಮಾಡಿಕೊಂಡು, ತಾವು ಮಾಡಲೇಬೇಕಾದ ಕೆಲಸಗಳನ್ನು ಖಚಿತಗೊಳಿಸಿಕೊಂಡು ಪ್ರೀತಿಯಿಂದ ಕೆಲಸ ಮಾಡಬೇಕು. ಈ ರೀತಿಯ ಕೆಲಸ ಮಾಡುವವರು ಸ್ವಾರ್ಥದಿಂದ, ಸ್ವಜನ ಪಕ್ಷಪಾತದಿಂದ, ಹಣ ಗಳಿಸುವ ಒಳ ಮಾರ್ಗಗಳಿಂದ, ಪ್ರಚಾರದ ಅಬ್ಬರದಿಂದ ದೂರವಿರುವುದು ಒಳ್ಳೆಯದು.

ಅಕಾಡೆಮಿಗಳಾಗಲಿ, ಸಾಹಿತ್ಯ ಪರಿಷತ್‌ಗಾಗಲಿ ಕಾಲ ಮುಗಿದ ಮೇಲೆ ಅವು ತಾವಾಗಿಯೇ ಇಲ್ಲವಾಗುತ್ತವೆ. ಸಾಮ್ರಾಜ್ಯಗಳೇ ಮುಳುಗಿ ಹೋದ ಮೇಲೆ ಇವುಗಳದು ಯಾತರ ದೊಡ್ಡಸ್ತಿಕೆ. ನಮ್ಮ ಮಧ್ಯೆ ಇರುವುದನ್ನು ಯಥಾವತ್ತಾಗಿ ಒಪ್ಪಿಕೊಂಡು ಬದುಕುವುದನ್ನು ಕಲಿಯಬೇಕು. ಇಲ್ಲದಕ್ಕೆ ಕೊರಗುತ್ತ, ಇರುವುದನ್ನು ದೂರಮಾಡುತ್ತ ವಿವೇಕವನ್ನು ಕಳೆದುಕೊಳ್ಳುವುದು ಒಳ್ಳೆಯ ಲಕ್ಷಣವಲ್ಲ. ಅತಿ ಮಹತ್ವಾಕಾಂಕ್ಷಿಗಳಾಗಿ ಜೀವನ ಶ್ರದ್ಧೆಯನ್ನು, ಬದುಕಿನ ಪ್ರೀತಿಯನ್ನು ಮಣ್ಣು ಮಾಡುವುದು ತಪ್ಪು. ಅಲ್ಲಮ ಪ್ರಭುವಿನ 'ಕೊಟ್ಟ ಕುದುರೆಯನೇರಲರಿಯದೆ ಮತ್ತೊಂದು ಬಯಸುವವರು ವೀರರೂ ಅಲ್ಲ, ಧೀರರೂ ಅಲ್ಲ' ಎಂಬ ಮಾತು ಇಲ್ಲಿ ಪ್ರಸ್ತುತ.

●

*......ಸಾಹಿತಿಗಳು ಅಸಾಹಿತಿಗಳಿಗಿಂತ ಭಿನ್ನ ಜಾತಿಯ ಉತ್ತಮರೆಂದು ನನಗಂತೂ ಯಾವತ್ತೂ ಕಂಡಿಲ್ಲ. ಮೂಲತಃ ಎಲ್ಲರೂ ಹುಲು ಮಾನವರೇ, ಹಾಗೆ ಹೇಳಿಕೊಳ್ಳಬಹುದಾದರೆ, ಸಾಮಾನ್ಯ ಮನುಷ್ಯರಿಗಿರುವ ದೌರ್ಬಲ್ಯ ಬಹುಜನ ಸಾಹಿತಿಗಳಿಗೂ ಇರುವಂಥದ್ದೇ. ಹಣ ಅಧಿಕಾರಗಳು ಸುಲಭವಾಗಿ ದಕ್ಕುವ ಲೋಭಕ್ಕೆದುದಾಗ ಪ್ರಾಯಃ ಬೆರಳೆಣಿಕೆಯ ನೈತಿಕ ಧೀರರನ್ನು ಬಿಟ್ಟು ಉಳಿದವರು ಲಾಲಸೆಗೆ ಸೋಲುತ್ತಾರೆ ಸೋತು ದುರ್ಬಲರಾಗುತ್ತಾರೆ.*

*ನಿಜವಾಗಿ ಪರಿಷತ್ತಿಗೆ ಯಾವಾಗ ರೋಗ ಬಡಿಯಿತು? ಬೆಳ್ಳಾವೆ ಅವರಿಗಿಂತಲೂ ಹೆಚ್ಚು ಅಸಾಹಿತಿಗಳಾದವರು ಇಲ್ಲಿ ಪ್ರವೇಶಿಸಿದಾಗ ಅಲ್ಲ, ಸರ್ಕಾರದ ಸುಲಭ ಹಣ ಇಲ್ಲಿ ನಿಯಂತ್ರಣವಿಲ್ಲದೆ ಹರಿಯತೊಡಗಿದಾಗ ಕ್ರಮೇಣ ಪರಿಷತ್ತು ಹಣದ ಕೇಂದ್ರವಾಯಿತು ಅಸಾಹಿತಿಗಳನ್ನು ಆಕರ್ಷಿಸಿತು. ಅಷ್ಟೇ ಅಲ್ಲ ದುರ್ಬಲ ಸಾಹಿತಿಗಳನ್ನು ಸೋಲಿಸಿ ಭ್ರಷ್ಟರನ್ನಾಗಿಸಿತು.*

**-ಕೆ. ವಿ. ಸುಬ್ಬಣ್ಣ**

(ಕಸಾಪ ಕ್ಯಾನ್ಸರಿಗೆ 'ಲಂಘನ' ಮದ್ದು ಲೇಖನದಿಂದ)

# ಮರೆಯಬಾರದ ಹುಲ್ಲು - ಹಸಿರು

■ ಡಿ. ವಿ. ಪ್ರಹ್ಲಾದ್

ಒಂದು ಪತ್ರಿಕೆಯ ಹತ್ಯೆಯ ಸುತ್ತ ಆಲೋಚಿಸುವ ಮೂಲಕ ಈ ಬರಹ ಆರಂಭಿಸಬಹುದೆಂದು ತೋರುತ್ತಿದೆ. ಕನ್ನಡದ ಮಟ್ಟಿಗೆ ಮಾಸ ಪತ್ರಿಕೆಗಳು ಹಲವಾರು ಇವೆ. ಅನೇಕ ವರ್ಷಗಳಿಂದ ಅವು ದಂಡಿಯಾಗಿ ಹೊರ ಬರುತ್ತಿವೆ. ಈ ಮಾಸಿಕ-ವಾರ ಪತ್ರಿಕೆಗಳಲ್ಲಿ ಬಹುಪಾಲು ಸ್ಥಾಪಿತ ಸಂಸ್ಥೆಗಳ ಒಂದು ಪೇಲವ ಶೋ ಆಫ್ ಆಗಿವೆ. ತಮ್ಮ ಪ್ರಿಂಟಿಂಗು ಯಂತ್ರದ ಖಾಲಿ ಸಮಯದ ಸದುಪಯೋಗಕ್ಕೆ ಇವುಗಳು ಬಳಕೆಯಾಗುತ್ತಿರುವಂತಿದೆ. ಮಯೂರ, ತುಷಾರ, ಮಲ್ಲಿಗೆ ಮುಂತಾದ ಪತ್ರಿಕೆಗಳು ಎಷ್ಟೊಂದು ನಿರ್ಜೀವವಾಗಿ ಯಾಂತ್ರಿಕವಾಗಿ ಹೊರಬರುತ್ತಿವೆ ಎಂದರೆ, ಇವು ಇರುವ ಇಲ್ಲದಿರುವ ಯಾವ ವ್ಯತ್ಯಾಸವೂ ಗೋಚರಿಸಲಾಗದಷ್ಟು.

ಆದರೆ ಒಂದೂವರೆ ವರ್ಷದ ಕೆಳಗೆ ವಿಜಯಸಂಕೇಶ್ವರರ ಪತ್ರಿಕೆಯ ಮಾಲೀಕತ್ವದ ಪ್ರಯೋಗದ ಭರದಲ್ಲಿ ಪ್ರಕಟಗೊಂಡದ್ದು ಭಾವನಾ, ಇದರ ಜೊತೆಗೇ ಹುಟ್ಟಿದ ಇನ್ನೊಂದು ವಾರ ಪತ್ರಿಕೆಯ ಹಾಗೆ ಇದೂ ಮುಂಚಿತವಾಗಿಯೇ ಮುಗಿದು ಹೋಗದೆ. ಕತೆಗಳಿಗೇ ಮೀಸಲಾದ ಮಾಸಿಕವೊಂದು ಎಷ್ಟೊಂದು ಜೀವಂತಿಕೆಯಿಂದ ವಿಭಿನ್ನವಾಗಿ ಕೆಲಸ ಮಾಡುವುದು ಸಾಧ್ಯ ಅಂತ ತೋರಿಸಿಕೊಟ್ಟವರು ಅದರ ಸಂಪಾದಕ ಜಯಂತ ಕಾಯ್ಕಿಣಿ. ನೂರಾರು ಜನ ಹೊಸ ಬರಹಗಾರರನ್ನ ಕಲಾವಿದರನ್ನ ಬರೆಯುವುದು ಬಿಟ್ಟವರನ್ನ ಮರೆತುಹೋದ ಹಿರಿಯರನ್ನ ತೊಡಗಿಸಿಕೊಂಡ ಜಯಂತ್ ಅಕ್ಷರಶಃ ಈ ಪತ್ರಿಕೆಯನ್ನ ತಮ್ಮತನವನ್ನ ಸುರಿದು ಕಟ್ಟುತ್ತಿದ್ದರು. ಪ್ರತಿ ಪುಟದಲ್ಲೂ ಅವರ ಜೀವಂತಿಕೆ ಪರಿಶ್ರಮಗಳು ಗೋಚರಿಸುತ್ತಿದ್ದವು. ಅದೇ ಹಳೆಯ ಫಾರ್ಮುಲಾಗಳನ್ನ ಮುದಿಬಿದ್ದು ಹೋದ ಲೇಖಕರುಗಳನ್ನ ಬಿಟ್ಟು ಹೊಸತಾಗಿ ನಳನಳಿಸುವ ಜೀವಂತಿಕೆ ಕೊಡುತ್ತಿದ್ದ ಜಯಂತರ 'ಭಾವನಾ'ದ ಸಾಂಸ್ಕೃತಿಕ ಪ್ರಾಮುಖ್ಯತೆ ಮತ್ತು ಅಗತ್ಯಗಳನ್ನ ಅರ್ಥಮಾಡಿಕೊಳ್ಳುವ ಸೂಕ್ಷ್ಮತೆ ಅದರ ಬಸ್ಸು-ಲಾರಿಗಳ ಮಾಲೀಕರಿಗೆ ಇರಲಿಲ್ಲ. ವೀ ಆರ್ ಎಲ್ ಭಾವನಾ ಪತ್ರಿಕೆಯ ಕತ್ತುಹಿಸುಕಿ ತಣ್ಣಗೆ ಮುಗಿಸಿಬಿಟ್ಟಿದ್ದು ಅವರ ಪಾಲಿಗೆ ಅದು ಇಷ್ಟವಿಲ್ಲದ ಅಥವಾ ನಷ್ಟವಾಗುತ್ತಿದ್ದ ಬಿಸಿನೆಸ್ಸಿನ ಮುಕ್ತಾಯ ಅಷ್ಟೇ. ನಿಜ ಮಾಸಿಕಗಳಿಗೆ ಅದರದ್ದೇ ಆದಾಯದ ಮಸೂಲ ಹುಟ್ಟುವುದು ಇವತ್ತಿನ ಪರಿಸ್ಥಿತಿಯಲ್ಲಿ ಸುಲಭದ ಮಾತಲ್ಲ. ಆದರೆ ಬಿಸಿನೆಸ್ಸು ಮತ್ತು ರಾಜಕಾರಣ ಯಾವತ್ತೂ ತನ್ನ ಲಾಭ ನಷ್ಟಗಳ ಲೆಕ್ಕಾಚಾರಗಳಲ್ಲಿ ಮುಳುಗಿ ಅದಕ್ಕೆ ಉಳಿದ ಯಾವ



ಸಂಗತಿಗಳೂ ಮುಖ್ಯವಾಗುವುದಿಲ್ಲ. ಅದನ್ನ ಕಟ್ಟಿದವರ ಅದಕ್ಕೆ ತೊಡಗಿಕೊಂಡವರ ಯಾವ ಭಾವನೆಗಳಿಗೂ ಅಲ್ಲಿ ಬೆಲೆ ಇಲ್ಲ. ಯಾವುದೇ ಒಂದು ಶಕ್ತ ಸಂಸ್ಥೆ ಹೀಗೇ ವರ್ತಿಸುತ್ತದೆ ನಮ್ಮ ಸರ್ಕಾರ ವರ್ತಿಸಿದ್ದೂ ಹೀಗೇ. ಈ ಅವಧಿಯ ಅಕಾಡೆಮಿ-ಪುಸ್ತಕ ಪ್ರಾಧಿಕಾರಗಳ ಅಧಿಕಾರಸ್ಥರ ಆಯ್ಕೆಯಲ್ಲಿ ಅದಕ್ಕಿರುವ ಮಾನದಂಡಗಳು ಜಾತಿ ಪ್ರಾದೇಶಿಕತೆ ರಾಜಕೀಯಸ್ಥರ ಜೊತೆಗಿನ ಸಂಬಂಧ ಮತ್ತು ರಾಜಕೀಯ ಒತ್ತಡ ಇಂಥಾ ಕುರುಡುತನದ್ದೇ. ಅದಕ್ಕೇ ಪುಸ್ತಕ ಪ್ರಾಧಿಕಾರದ ಅಧ್ಯಕ್ಷತೆಗೆ ಆಯ್ಕೆಯಾಗಿದ್ದ ಶ್ರೀನಿವಾಸರಾಜು ಅಂಥ ಹಿರಿಯ ಸಜ್ಜನರನ್ನ ರಾತ್ರೆ ಕಳೆದು ಬೆಳಗಾಗುವುದರಲ್ಲಿ ಅನೇಕ ಒತ್ತಡಗಳಿಗೆ ಮಣಿದು ಸದ್ದಿಲ್ಲದೆ ಹಿಂದೆ ಸರಿಸಿಬಿಟ್ಟಿತು. ಯಾರನ್ನೂ ಕೇಳದೆ ಬೇಡದೆ ತಮ್ಮಪಾಡಿಗೆ ತಾವಿದ್ದ ರಾಜು ಅಂಥವರಿಗೆ ಇಂಥಾ ಪ್ರಸಂಗಗಳು ಹುಟ್ಟುಹಾಕುವ ಮುಜುಗರ ನಮ್ಮ ಸರ್ಕಾರಿ ಸಂಸ್ಕೃತಿ ವಕ್ತಾರರ ಅರಿವಿನಾಚೆಗಿನ ಸಂಗತಿಗಳಾಗಿಬಿಡುತ್ತವೆ. ಯಾವುದೇ ಸಂಸ್ಥೆಗೆ ಸರಿಯಾದ ಸ್ಥಾನಕ್ಕೆ ಯೋಗ್ಯರೊಬ್ಬರ ಆಯ್ಕೆ ಅದರ ಘನತೆ ಜೀವಂತಿಕೆ ಹೆಚ್ಚಿಸುವ ಕೆಲಸ, ಆದರೆ ವಿವೇಚನೆ ಕಳಕೊಂಡಿರುವ ಭ್ರಷ್ಟ ವ್ಯವಸ್ಥೆಗಳಿಗೆ ಬುಲ್‌ಡೋಜರ್ ಹಾಗೆ ಹೊಸಕಿಹಾಕುತ್ತಾ ಸಾಗುವುದಷ್ಟೇ ಗೊತ್ತು. ಅದಕ್ಕೆ ಗುರಿ ಇರುತ್ತದೆ, ವಿವೇಕ? ಉಹುಂ. ನಮ್ಮ ಬಹುಪಾಲು ಸಾಂಸ್ಕೃತಿಕ ಚಟುವಟಿಕೆಗಳ ಜುಟ್ಟಿರುವುದು ಇಂಥಾ ಸಂಸ್ಥೆಗಳ ಕೈಯಲ್ಲೇ. ಪರಿಷತ್ತು, ಅಕಾಡೆಮಿಗಳು, ಪತ್ರಿಕೆಯ ಮಾಲೀಕತ್ವದ ಸಂಸ್ಥೆಗಳು ಇಲ್ಲಾ ಗ್ಯಾಲರಿಗಳು ಹಣ ಜಾತಿ ಅಧಿಕಾರ ಅಥವಾ ಅವರ (ಸಂಸ್ಥೆಯ) ವರ್ಚಸ್ಸಿನ ವರ್ಧನೆ ಇಲ್ಲವೇ ರಾಜಕಾರಣದ ಬಲದ ಮೇಲೆ ನಿಲ್ಲುವ ಈ ಸಂಸ್ಥೆಗಳಿಗೆ ಸೂಕ್ಷ್ಮತೆ ವಿವೇಚನೆಗಳ ಬಹಳಷ್ಟು ಪ್ರಸಂಗಗಳಲ್ಲಿ ಮಟಾಮಾಯವಾಗಿರುತ್ತವೆ. ಇವುಗಳ ಎಲ್ಲ ಮುಖ್ಯ ನಿರ್ಧಾರಗಳು ಆ ಕ್ಷಣದ ಅಥವಾ ಆ ಸಮಯದ ನಿರ್ದಿಷ್ಟ ಒತ್ತಡಗಳನ್ನ ಅವಲಂಬಿಸಿರುತ್ತವೆ. ಎಂಥದ್ದೋ ಒಂದು ಕೆಲಸ ನಡೆದರೆ ಸಾಕು ಅವರಿಗೆ ಕಾಳಿ ಬೋಳಿಯಾದರೂ ಭಾಗ್ಯವೇನು ಎಂಬಂಥ ನಿಲುವುಗಳು. ಇಂಥಾ ಸ್ಥಾಪಿತ ವೈರುಧ್ಯಗಳ ಮಧ್ಯೆ ಇನ್ನಷ್ಟು ಸೃಷ್ಟಿಸಿಕೊಳ್ಳುತ್ತಾ ಬದುಕುತ್ತಿರುವುದು ನಮ್ಮ ಕಾಲದ ವ್ಯಂಗ್ಯ ಎಂದೇ ಹೇಳಬೇಕಿದೆ.

ಸರ್ಕಾರದ ಅಂಗ ಸಂಸ್ಥೆಗಳು ಅಕಾಡೆಮಿಗಳು, ವಿಶ್ವವಿದ್ಯಾಲಯಗಳು ಮತ್ತು ಇತರ ಬೃಹತ್ ಸಂಸ್ಥೆಗಳು ಕೆಲವು ನಿಯಮಗಳಿಗೆ ಮತ್ತು ಪ್ರಜಾಪ್ರಭುತ್ವಕ್ಕೆ ಬದ್ಧವಾಗಿರಬೇಕಾದ್ದು ಅತ್ಯಗತ್ಯ. ಇಂಥಾ ಸಂಸ್ಥೆಗಳ ಅಧಿಕಾರಸ್ಥರೊಬ್ಬರನ್ನ ಒಬ್ಬ ಸಾಹಿತಿ ಅಥವಾ ಕಲಾವಿದ ಅಲ್ಲ ಅಂತ ಹೇಳುವುದಾದರೂ ಹೇಗೆ, ಅವರೂ ತಾನು ಹೇಗೆ ಸಾಹಿತಿ ಅಥವಾ ಕಲಾವಿದ ಅಂತ ತನ್ನ ವಾದ ಮಂಡಿಸುತ್ತಾನೆ. ಇದೊಂದು ಕೊನೆಯಿಲ್ಲದ ಜಗಳ, ಡೆಮಾಕ್ರೆಸಿಯಲ್ಲಿ ಆತ್ಮವಿಮರ್ಶೆ ಎನ್ನುವುದನ್ನ ಗೋರಿ ಮಾಡಿದಾಗ ಹುಟ್ಟುವ ಕಳೆಗಳು ಇವು ಅಷ್ಟೇ. ಇನ್ನು ಪ್ರಾದೇಶಿಕ ಜಾತಿಯ ಪ್ರಾತಿನಿಧ್ಯಕ್ಕೆ ಒತ್ತುಕೊಟ್ಟರೆ ಗುಣಮಟ್ಟದ ಪ್ರಶ್ನೆ ಏಳುತ್ತದೆ. ಇದರ ಮಧ್ಯೆ ಇಂತಿಷ್ಟು ಸಮಯ ಇಂತಿಷ್ಟೇ ಹಣ ಅಂತೆಲ್ಲಾ ರೂಲ್ಸು ಹಾಕಿಕೊಂಡು ಬೆಳೆಸಿದ ಸಂಸ್ಕೃತಿ ಬರೀ ಸರ್ಕಾರಿ ಸಂಸ್ಕೃತಿಯಾಗಿ ಇರುತ್ತದೆ ಅಷ್ಟೆ. ಅಥವಾ ನಿಜಕ್ಕೂ ಒಂದು ಸಂಸ್ಕೃತಿಯನ್ನ ಬೆಳೆಸಲು, ಅದೂ ಹೀಗೆ ಸಾಧ್ಯವೆ ಎನ್ನುವುದನ್ನ ಚರ್ಚಿಸಬೇಕಿದೆ. ಬೆಳೆಯುತ್ತಿರುವವರು ಏನಿದ್ದರೂ ರಾಜಕಾರಣಿಗಳು ಸರ್ಕಾರಿ ಸಾಹಿತಿ ಕಲಾವಿದರುಗಳಷ್ಟೇ. ಒಂದು ಆಡಳಿತ ಯಂತ್ರ ಬರೀ ಯಂತ್ರದ ಹಾಗೆ.

ಇಂಥಾ ಸರ್ಕಾರಿ ಸಾಂಸ್ಕೃತಿಕ-ಸಾಂಸ್ಥಿಕ ಗದ್ದಲಗಳಿಗೆ ಪರ್ಯಾಯವಾಗಿ ಚಿಕ್ಕಪುಟ್ಟ ಅನೇಕ

ಚಟುವಟಿಕೆಗಳು ನಮ್ಮ ಸಂಸ್ಕೃತಿಯನ್ನ ಅದರ ನಿರಂತರತೆಯನ್ನ ಜೀವಂತಗೊಳಿಸುತ್ತಾ ಬದುಕಿವೆ. ಹುಲ್ಲು ಹಸಿರಿನ ಹಾಗೆ, ಅವು ಯಾವತ್ತೂ ಇತಿಹಾಸದ ಭಾಗಗಳಾಗಿಲ್ಲ (ಬಹುಪಾಲು) ತಮ್ಮ ಪಾಡಿಗೆ ತಾವು ಬದುಕಿದ್ದು ಮುಗಿದು ಹೋದಂಥವು. ಯಾವ ರಾಜಕಾರಣದ ಸೋಂಕಿಲ್ಲದ ಶುದ್ಧವಾದ ಪುಸ್ತಕ ಪ್ರೀತಿ ಕಲೆಯ ಬಗೆಗಿನ ಆದರಗಳು ನಿಜವಾದ ಸಂಸ್ಕೃತಿಯ ಅಗತ್ಯಗಳೆಂದು ತೋರುತ್ತದೆ. ಇದು ಒಬ್ಬರ ಅಥವಾ ಒಬ್ಬಿಬ್ಬರ ವೈಯಕ್ತಿಕ ನೆಲೆಗಳಲ್ಲಿ ಆಗಿರಬಹುದು ಅಥವಾ ಕೆಲವೇ ಕೆಲವು ಆಸಕ್ತರ ಪರಿಶ್ರಮದ ಫಲಗಳಿರಬಹುದು. ಇಂಥವುಗಳಲ್ಲಿ ಅನೇಕ ಪ್ರಕಾಶನ ಸಂಸ್ಥೆಗಳು, ಕಲಾಶಾಲೆಗಳು, ಕಾಲೇಜು ಕನ್ನಡ ಸಂಘಗಳು, ಗ್ರಾಮ ಊರುಗಳ ಮಟ್ಟದಲ್ಲಿ ನಡೆಯುವ ಅಧ್ಯಯನ ಕೂಟಗಳು ಇಲ್ಲವೇ ಖಾಸಗಿ ಸಂಸ್ಥೆಗಳು, ಸಾಹಿತ್ಯ ಪತ್ರಿಕೆಗಳು ರಾಜ್ಯದ ಉದ್ದಗಲಕ್ಕೂ ವ್ಯಾಪಿಸಿಕೊಂಡಿದೆ. ಇವುಗಳಲ್ಲಿ ಬಹುಪಾಲು ಅಲ್ಪಾಯುಷಿಗಳಾಗಿವೆ ಮತ್ತೆ ಕೆಲವು ಏಕವ್ಯಕ್ತಿ ಪ್ರದರ್ಶನಗಳೂ ಆಗಿವೆ ಆದರೆ ಇವು ಒಂದು ಸಂಸ್ಕೃತಿಯ ನಿರಂತರತೆ ಕಾಪಾಡುತ್ತಿವೆ.

ಕಳೆದ ಶತಮಾನದ ಆರಂಭಕ್ಕೆ ರೂಪುಗೊಂಡ ಧಾರವಾಡದ 'ಗೆಳೆಯರ ಗುಂಪು' ಅದು ತನ್ನ ಜೀವಿತಾವಧಿಯಲ್ಲಿ ಪ್ರಕಟಿಸಿದ 'ಜಯ ಕರ್ನಾಟಕ' ಮತ್ತು ಅಲ್ಪಕಾಲದ 'ಜೀವನ' ಪತ್ರಿಕೆಗಳು ಅರ್ಥವಿಲ್ಲದ ಸ್ವಾರ್ಥವಿಲ್ಲದ ಬರಿಯ ಭಾವಗೀತಾ ಎಂಬಂತೆ ಬೆಳೆದು ಮುಗಿದವು. ಅದರ ಕೊಂಬೆಯ ಹಾಗೆ ಹುಟ್ಟು ಪಡೆದ 'ಮನೋಹರ ಗ್ರಂಥಮಾಲೆ' ಕನ್ನಡ ಸಾಹಿತ್ಯಕ್ಕೆ ಅದರಲ್ಲೂ 50-60ರ ದಶಕದಲ್ಲಿ ಬೆಳಕಿಗೊಡ್ಡಿದ ಅನೇಕ ಲೇಖಕರು ಬೆಳೆದು ನಿಂತದ್ದು ಈಗ ಇತಿಹಾಸ. ಮನೋಹರ ಗ್ರಂಥಮಾಲೆಯ ಅಟ್ಟದ ಮೇಲಿನ ಚರ್ಚೆಗಳು ಕನ್ನಡ ಸಾಹಿತ್ಯ ಸಂಸ್ಕೃತಿಯ ಒಂದು ಸುಂದರ ನೆನಪು. ಎ. ಆರ್. ಕೃಷ್ಣಶಾಸ್ತ್ರಿಗಳು ಮತ್ತು ಜಿ. ಪಿ. ರಾಜರತ್ನಂ ಕಟ್ಟಿ ಬೆಳೆಯಿಸಿದ 'ಸೆಂಟ್ರಲ್ ಕಾಲೇಜು ಕನ್ನಡ ಸಂಘ', ಇವತ್ತಿನ ಅನೇಕ ಲೇಖಕರ ತೊಟ್ಟಿಲಾಗಿದೆ. ಮೈಸೂರಿನ ನವ್ಯ ಕಾವ್ಯದ ಹೆದ್ದೆರೆಯ ಸಂದರ್ಭದ 'ಕಾಫೀ ಕ್ಲಬ್' ಇತ್ತೀಚಿನ ಇಪ್ಪತ್ತೈದು ವರ್ಷಗಳಲ್ಲಿ ಕ್ರೈಸ್ಟ್ ಕಾಲೇಜು ಕನ್ನಡ ಸಂಘದ ಮೂಲಕ ಶ್ರೀನಿವಾಸರಾಜು ಅಂಥವರ ಸಾಧನೆ ಅಪೂರ್ವ, ಹಡಪದ್ ಮಾಸ್ತರ ಏಕಾಂಗಿ ಪರಿಶ್ರಮದ ಫಲವಾದ ಕೆನ್ ಕಲಾಶಾಲೆ ಅನೇಕ ಕಲಾವಿದರ ಲೇಖಕರ ಮನೆಯ ಹಾಗಿದೆ, ಅದಕ್ಕೆ ಇವತ್ತಿಗೂ ಒಂದು ಸುಸಜ್ಜಿತ ಕಟ್ಟಡ ವಿಲ್ಲದಿದ್ದರೂ ನಿರಂತರವಾದ ಜೀವಂತಿಕೆ ಇದೆ. ಕರ್ನಾಟಕ ಸಂಗೀತದ ಬಗೆಗಿನ ಶುದ್ಧ ಪ್ರೀತಿಯಿಂದ ಬೆಂಗಳೂರಿನ ಅನನ್ಯ ಸಂಸ್ಥೆ ರೂಪಿಸುತ್ತಿರುವ ಸಂಗೀತ ಕಾರ್ಯಕ್ರಮಗಳು ಇವೆಲ್ಲಾ ಸರ್ಕಾರ ಬಿತ್ತಿ ಬೆಳೆದ ಬೆಳೆಗಳಲ್ಲ, ಕೆ.ವಿ. ಸುಬ್ಬಣ್ಣನಂಥವರು ಹೆಗ್ಗೋಡಿನಂಥಾ ಒಂದು ಪುಟ್ಟ ಗ್ರಾಮದಲ್ಲಿ ಮಾಡಿದ ನೀನಾಸಂ ಅಕ್ಷರ ಪ್ರಕಾಶನದ ಕೆಲಸಗಳು ಜಗತ್ತಿನ ಗಮನ ಸೆಳೆಯಬಲ್ಲಂಥವು ಗಳಾಗಿರುತ್ತವೆ. ನೆಲದ ಸತ್ವ ಕಾಪಾಡುವ ಹುಲ್ಲುಗಳಾಗಿರುತ್ತವೆ. ಅಂಬಾರ ಕೊಡ್ಲದ ರಾಘವೇಂದ್ರ ಪ್ರಕಾಶನ, ಸೋಣಂಗೇರಿಯ ಜನಗಳ ಕಲೆಯ ಬಗೆಗಿನ ಆದರ, ಗಂಗೊಳ್ಳಿ ಗ್ರಾಮಸ್ಥರ ನಾಟಕ ಪ್ರೇಮ ಒಂದೇ ಎರಡೆ ಸಾವಿರಾರು ಉದಾಹರಣೆ ಕೊಡಬಹುದು. ಈ ಖಾಸಗೀ ಚಟುವಟಿಕೆಗಳಲ್ಲಿ ಯಾವುದೇ ಅಧಿಕಾರಶಾಹಿಯ ತೊಡಕುಗಳಿಲ್ಲ. ಶುದ್ಧ ಪ್ರೀತಿ ಮುಗ್ಧ ಬದ್ಧತೆಗಳು ಇಲ್ಲಿ ಮುಖ್ಯವಾಗಿ ಇರುತ್ತವೆ. ಕೆಲವು ಕಡೆ ವ್ಯಕ್ತಿಗತ ತೆವಲು ಪ್ರದರ್ಶನಗಳು ಇವೆ, ಆದರೆ ಅವುಗಳು ಹೆಚ್ಚುಕಾಲ ನಿಲ್ಲಲಾಗುವುದಿಲ್ಲ. ಅನೇಕ ಸಲ ಇವುಗಳಿಗೆ ಕೆಲಸ ಮಾಡುವ ವ್ಯಕ್ತಿಗಳ ಮಿತಿ-ಅತಿಗಳು ಆಯಾ ಚಟುವಟಿಕೆಗಳದ್ದೂ ಆಗಿಬಿಡುತ್ತವೆ ಮತ್ತು ವೃತ್ತಿಪರತೆ ಹಣ ಮತ್ತು ಇತರ ಜನ ಸಹಾಯ ಕಡಿಮೆ.

ಇಂಥಾ ಪರಂಪರೆಯೊಂದನ್ನ ನಮ್ಮಲ್ಲಿ ಇನ್ನೂ ಗುರುತಿಸಲು ಸಾಧ್ಯವಾಗಿಲ್ಲ ಅಂಥಾದ್ದೊಂದು ಕೆಲಸ ಒಂದು ವಿಶಿಷ್ಟ ಸಾಂಸ್ಕೃತಿಕ ಚರಿತ್ರೆಯಾದೀತು, ನಮ್ಮ ಮಾಧ್ಯಮಗಳೂ ಅಷ್ಟೇ ಕುರುಡಾಗಿ ವರ್ತಿಸುತ್ತವೆ ಅಧಿಕಾರಸ್ಥರ ಮತ್ತು 'ಹೆಸರ' ಬಲ ಉಳ್ಳವರ ಚಟುವಟಿಕೆಗಳಿಗೆ ಸಿಗುವ ಪ್ರಾಮುಖ್ಯತೆ ಪ್ರಚಾರ ಇತರರಿಗಿಲ್ಲ. ಈ ಪತ್ರಿಕೆ ದೂರದರ್ಶನಗಳದ್ದೇನಿದ್ದರೂ ನಾಳೆಗೆ ಮೂರು ಮೊಳ ನೇಯುವ ಕೆಲಸವೇ. ಅವೂ ಇಂಥಾ ಧಡೂತಿ ಸಂಸ್ಥೆಗಳ ಭಾಗಗಳೇ ತಾನೇ? ದೊಡ್ಡದಾಗಿದ್ದವು ಮಾತ್ರಾ ಕಣ್ಣಿಗೆ ಬೀಳುತ್ತವೆ.

ಒಬ್ಬ ಸಾಧಾರಣ ಕನ್ನಡದ ರಾಜುಮೇಷ್ಟ್ರು ಯಾವ ಅಕಾಡೆಮಿಗಳೂ ಮಾಡಲಾಗದಷ್ಟು ಕೆಲಸ ಮಾಡಬಹುದಾದರೆ, ಒಬ್ಬ ಜಯಂತ ಕಾಯ್ಕಿಣಿಯ ಸಾಹಿತ್ಯ ಪ್ರೀತಿ ಮತ್ತು ಅಭಿರುಚಿ ಅಷ್ಟೊಂದು ಜೀವಂತ ಮನಸ್ಸುಗಳನ್ನ ಒಟ್ಟುಗೂಡಿಸಲು ಸಾಧ್ಯವಾಗುವುದಾದರೆ, ಸರ್ಕಾರಿ ವ್ಯವಸ್ಥೆಗಳ ದೋಷ ಅರ್ಥವಾದೀತು. ಸರಿಯಾದ ಜಾಗಕ್ಕೆ ಸರಿಯಾದ ಜನಗಳನ್ನ ಆರಿಸಲಾಗದ ಭಂಡತನ ಅರ್ಥವಾದೀತು, ಯಾವುದಕ್ಕೂ ಪ್ರೀತಿ ಮುಖ್ಯ, ಶುದ್ಧವಾದ ರೀತಿ ಮುಖ್ಯ, ನಮ್ಮ ಸಾಮಾಜಿಕ ಬದುಕಿನಲ್ಲಿ ಇಲ್ಲದ ಅದನ್ನ ಎಲ್ಲಿಂದ ತರೋಣ?

●

*ಯಾವುದೇ ಶ್ರೇಷ್ಠ ಸಾಹಿತ್ಯದ ಮೂಲಭೂತವಾದ ಹುಡುಕಾಟ ಮನುಷ್ಯನ ಅಸ್ತಿತ್ವಕ್ಕೆ ಸಂಬಂಧಪಟ್ಟಿದ್ದೇ ಆಗಿರುತ್ತದೆ. ಸಾಮಾಜಿಕ ಮನುಷ್ಯನೊಬ್ಬನ ಅರ್ಥಪೂರ್ಣ ನೆಲೆಗಳನ್ನು ಕಾಣುವತ್ತ ಈ ಹುಡುಕಾಟವು ಮುಖ ಮಾಡಿರುತ್ತದೆ ಚರಿತ್ರೆಯನ್ನು ಮನುಷ್ಯನು ರೂಪಿಸುವನೆನ್ನುವುದು ನಿಜ, ಆದರೆ ಮನುಷ್ಯನ ಸಂಬಂಧಗಳ ಅರ್ಥಪೂರ್ಣ ನೆಲೆಗಳ ಶೋಧನೆಯನ್ನು ಸಾಹಿತ್ಯವು ಗಾಢಶೋಧನೆಗೆ ಗುರಿಪಡಿಸುತ್ತದೆ. ಸಾಹಿತ್ಯ ಕೃತಿಗಳಲ್ಲಿ ಈ ಹುಡುಕಾಟ ಇರುವ ಸ್ಥಿತಿ ಮತ್ತು ಇರಬೇಕಾದ ನೆಲೆಗಳ ನಡುವಣ ದ್ವಂದ್ವವನ್ನು ಕಟ್ಟಿಕೊಡುವುದರಲ್ಲಿ ಎದ್ದು ಕಾಣುತ್ತದೆ. ಹೀಗಾಗಿ ಚರಿತ್ರೆಯ ಗತಿ ತರ್ಕವನ್ನು ಹಿಡಿಯುವುದರ ಜೊತೆ ಜೊತೆಯಲ್ಲಿಯೇ ಚರಿತ್ರೆಯ ಹೊಸ ಆಶಯಗಳನ್ನೂ ಇವು ಸೂಚಿಸುತ್ತವೆ ಸಾಹಿತ್ಯದ ಕೃತಿಗಳಲ್ಲಿ ಕಾಣಿಸುವ ಈ ಸ್ವರೂಪವು ಮನುಷ್ಯನ ಸಂಬಂಧಗಳ ನಾಟ್ಯೀಕರಣದ ನೆಲೆಯಲ್ಲಿಯೇ ಮುಖ್ಯವಾಗಿ ಹೊರ ಹೊಮ್ಮುತ್ತವೆ.*

**-ಡಾ|| ಬಸವರಾಜ ಕಲ್ಗುಡಿ**

(ಕನ್ನಡ ಸಾಹಿತ್ಯದಲ್ಲಿ ಮನುಷ್ಯನ ಪರಿಕಲ್ಪನೆ ಲೇಖನದಿಂದ)

# “ಅಕ್ಕ ಮತ್ತು ಮಲ್ಲಿಗೆ ಬಳ್ಳಿ”

■ ವಾಸುದೇವ ನಾಡಿಗ್

ಬದುಕಿನಂಗಳದಲ್ಲಿ
ಮಲ್ಲಿಗೆ ಬಳ್ಳಿ
ಹೂ ಅಕ್ಕನ ಕೈ ಬೆರಳು
ಚಿಲುಮಿಸುವ
ಹನಿ ಹನಿ ನೀರು
ನಿತ್ಯ ಸಂಜೆ ಬಾಯಿ ಕಳೆವ
ಒಡಲು.




ಮುಗಿಲೆತ್ತರಕೆ ಬೆಳೆವ
ಅದರದ್ದೇ ಕನಸು
ಮಲ್ಲಿಗೆ ಬಳ್ಳಿಗೆ
ಗುರಿ ಎಲ್ಲಿಗೆ?

ಪಾತಿ ತೋಡಿ
ಪ್ರೀತಿ ಊಡಿ
ಬಳ್ಳಿಗೆ ಕೋಲು ಕೊಟ್ಟಿದ್ದಾಯಿತು
ಆಧಾರಕ್ಕೆ
ಕೈಬೆರಳ ಕೂಡಿಸಿದ್ದಾಯಿತು

ಅಕ್ಕ ಗೊಣಗುತ್ತಾಳೆ
ಮಲ್ಲಿಗೆ ಬಳ್ಳಿಗಾಗಿ
ಹಿಡಿದು ಕಟ್ಟಿದ್ದಕ್ಕಾಗಿ
ಕೈಮೀರಿ ಬೆಳೆದು
ಅಡ್ಡ ಬರಬಾರದೆಂಬ ಮಾತಿಗಾಗಿ.

‘ನೀ ತೋರಿದ ಹಾದಿಗೇ
ಏಕೆ ಮುಖ ಮಾಡಬೇಕು?
ಬೆರಳ ಬೆರೆಸ ಬೇಕು?
ಹೂ ಬಿಟ್ಟರೆ ಸಾಕು,
ಕಂಪು ತಾನೇ ಬೇಕು?
ಬಳ್ಳಿದಾರಿಯ ಆಯ್ಕೆ ಬಳ್ಳಿಯದೇ
ಮುಗಿಲ ಕನಸಿಗೆ ಬಂಧನವೆ?”

ಎಂದವಳ ಕಣ್ಣುಗಳಲಿ
ಝಗ್ಗನೆ ಹೊಳೆಯುತ್ತದೆ
ಸಾವಿರ ಹುಡುಗಿಯರ ಕನಸುಗಳು!
ಬಳ್ಳಿಗೆ ಒಳಗೊಳಗೇ ಮುಗುಳ್ನಗೆ.

ಚಂದ್ರಶೇಖರ ಕಂಬಾರರ ನಾಟಕಗಳಲ್ಲಿ

# ವಸಾಹತುಶಾಹಿಯ ಸ್ವರೂಪದ ಗ್ರಹಿಕೆ

■ ಡಾ|| ಪುರುಷೋತ್ತಮ ಬಿಳಿಮಲೆ



**ಡಾ.** ಕಂಬಾರರು ತಮ್ಮ ಬಗ್ಗೆ ಹೇಳಿಕೊಂಡ ಎರಡು ಮಾತುಗಳನ್ನು ಇಲ್ಲಿ ಉಲ್ಲೇಖಿಸ ಬಯಸುತ್ತೇನೆ.

> *ಒಂದು :* "ನಾನು ಬೆಳಗಾವಿಗೆ ಬರುವವರೆಗೆ ಬೆಳಗಾವಿ ನಮಗೆ ಒಂದು ಕತೆಯಾಗಿತ್ತು. ಬೆಳಗಾವಿಯ ಬಗ್ಗೆ ನಮ್ಮಲ್ಲಿ ಅಷ್ಟೇ ಭಯವೂ ಇತ್ತು. ನೀವು ವಸಾಹತುಶಾಹಿ ಎಂದು ಹೇಳಿದಿರಲ್ಲಾ, ಆ ವಸಾಹತುಶಾಹಿಯ ಅಂದರೆ ಬ್ರಿಟಿಷರ ಮಿಲಿಟರಿ, ಬೆಳಗಾವಿಯಲ್ಲಿ ಬೀಡುಬಿಟ್ಟಿತು. ನಮ್ಮೂರಿನಿಂದ ಆರು ಕಿ.ಮೀ. ದೂರದಲ್ಲಿ ಗೋಕಾಕ್. ಅಲ್ಲಿಯೂ ಮಿಲಿಟರಿ ನೆಲೆಯಿತ್ತು. ಅಂದರೆ ಬ್ರಿಟಿಷರೇ ಆಳುತ್ತಿದ್ದರು. ಬ್ರಿಟಿಷರಿಗೆ ನಾವು ಬಹಳ ಹೆದರುತ್ತಿದ್ದೆವು.....ಅವರ ಬಗ್ಗೆ ಒಂದು ರೀತಿಯ ಕೋಪ ಮತ್ತು ಭಯ ನಮ್ಮಲ್ಲಿ; ಮೂಡಿದ್ದವು" (1992 : 72).

> *ಎರಡು :* "ಬ್ರಿಟಿಷರು ಬಂದು ನಮ್ಮಲ್ಲಿ ಕತೆಗಳನ್ನು ಸೃಷ್ಟಿಸಿದರು, ನಮ್ಮೂರಿನ ಒಬ್ಬ ಯುವಕ ಪ್ರಥಮ ಬಿ.ಎ. ಓದುತ್ತಿದ್ದನು. ಅವನು ನಮಗೊಂದು ಕತೆ ಹೇಳುತ್ತಿದ್ದನು. ಬ್ರಿಟಿಷರ ಹೆಂಗಸೊಬ್ಬಳು ಬಂದು ಅವನ ಕೈ ಹಿಡಿದುಕೊಂಡಳಂತೆ. ನನ್ನನ್ನು ಮದುವೆಯಾಗು ಎಂದು ಕೇಳಿದಳಂತೆ. ಆಗ ಆತ ಛೇ....ಛೇ ನಾನು ಒಲ್ಲೆ ಎಂದನಂತೆ. ಇದು ಒಂದು ರೀತಿಯ ದೊಡ್ಡಸ್ತಿಕೆ. ಇಂಗ್ಲೀಷ್ ಹೆಂಗಸೊಬ್ಬಳು ಬಂದು ಮದುವೆಯಾಗು ಎಂದು ಕೇಳಿದರೂ ಇವನು ಬೇಡವೆಂದವನೆಂದರೆ ಇವನನ್ನು ಬಹಳ ದೊಡ್ಡ ಮನುಷ್ಯನೆಂದು ನಮ್ಮ ಜನ ತಿಳಿದುಕೊಳ್ಳುತ್ತಿದ್ದರು." (1992 : 73)

ಮೇಲಿನ ಎರಡೂ ಮಾತುಗಳ ಹಿಂದಿನ ವೈರುದ್ಧ್ಯಗಳನ್ನು ಗಮನಿಸ ಬೇಕು. ಮೊದಲಿನ ಮಾತಲ್ಲಿ ಬ್ರಿಟಿಷರ ಬಗೆಗಣ ಭಯ ಮತ್ತು ದ್ವೇಷ ತಾನಾಗಿಯೇ ಪ್ರಕಟವಾಗಿದೆ. ಗೋಕಾಕ್ ಹೈಸ್ಕೂಲಿಗೆ ನಡೆದುಕೊಂಡು ಹೋಗುವಾಗ ದಾರಿಯಲ್ಲಿ ಸಿಕ್ಕಿದ ಸೋಪಿನ ತುಂಡನ್ನು ತಿಕ್ಕಿ ತಿಕ್ಕಿ ನಾಶಮಾಡುವ ಕ್ರಿಯೆಯು ಇದನ್ನೇ ಸೂಚಿಸುತ್ತದೆ. ಆದರೆ ಇಂಥ ನಿಲುವಿಗೆ ವಿರುದ್ಧವಾಗಿ ಎರಡನೇ ಮಾತಲ್ಲಿ ಬ್ರಿಟಿಷರ ಬಗೆಗೆ ಒಂದು ಬಗೆಯ ಗೌರವವನ್ನು, ಒಳಗೊಳಗೇ ಅವರನ್ನು ಆರಾಧಿಸುವ ಪ್ರವೃತ್ತಿ ಯನ್ನು ಕಾಣಬಹುದು. ಈ ಪ್ರವೃತ್ತಿಯು ಸೋಪನ್ನು ತಿಕ್ಕಿ ತಿಕ್ಕಿ ನಾಶಮಾಡಿದ ಅನಂತರವೂ ಸೋಪನ್ನು ಉಜ್ಜಿದ ಕೈಗಳನ್ನು ಮೂಸಿನೋಡಿ ಸಂತೋಷಿಸುವ ಚಟುವಟಿಕೆಗಳಿಗೆ ಪೂರಕವಾಗಿದೆ.

ವಸಾಹತುಶಾಹಿಯ ಬಗೆಗೆ ಚರ್ಚಿಸುವಾಗ ಇದಿರಾಗುವ ಮುಖ್ಯ ಸಮಸ್ಯೆಯೇ ಇದು. ಅದು ಒಂದೆಡೆ, ಆತಂಕವನ್ನು ಹುಟ್ಟಿಸಿದರೆ, ಇನ್ನೊಂದೆಡೆ ಸಂಭ್ರಮಕ್ಕೂ ಕಾರಣವಾಗಿದೆ. ಕೆಲವರು ಅದನ್ನು

'ಕಲೋನಿಯಲ್ ರಾಕ್ಷಸ' ಎಂದು ಕರೆದರು. ಆದರೆ ಅದೇ ಹೊತ್ತಲ್ಲಿ ಕುವೆಂಪು ಅವರು "ಈ ದೇಶಕ್ಕೆ ಬ್ರಿಟಿಷರು ಬಾರದೇ ಇರುತ್ತಿದ್ದರೆ, ನಾನು ಬ್ರಾಹ್ಮಣರ ಮನೆಯಲ್ಲಿ ಸೆಗಣಿ ಹೆಕ್ಕುತ್ತಿದ್ದೆ" ಎಂದು ಹೇಳಿದರು. ಹೀಗೆ ನೋಡಿದಾಗ ನಮಗೆ ಡಿ. ಆರ್. ನಾಗರಾಜರ ಹೇಳಿಕೆಯು ಅರ್ಧಸತ್ಯವೆಂಬುದು ಸ್ಪಷ್ಟವಾಗುತ್ತದೆ. ಅವರ ಪ್ರಕಾರ "ವಸಾಹತುಶಾಹಿ ಅನುಭವದ ಚಾರಿತ್ರಿಕ ಸತ್ಯವೆಂದರೆ, - 'ವಿನಾಶ ಮತ್ತು ನಿರ್ನಾಮ' ಈ ದೇಶದ ಶ್ರೀಮಂತರ ಮತ್ತು ಬ್ರಾಹ್ಮಣರ ಪರವಾದ ಮಾತಿದು. ಏಕೆಂದರೆ ಅವರ ಹತ್ತಿರ ಇದ್ದದ್ದೆಲ್ಲ ಬ್ರಿಟಿಷರಿಂದ 'ವಿನಾಶ' ಮತ್ತು 'ನಿರ್ನಾಮ'ಕ್ಕೆ ಒಳಗಾಗುವ ಸ್ಥಿತಿಯೊಂದು ನಿರ್ಮಾಣವಾಗಿತ್ತು. ಆದರೆ ಶ್ರೇಣೀಕರಣದ ಕೆಳ ತುದಿಯಲ್ಲಿದ್ದ ಅಥವಾ ದುಡಿಯುವುದೊಂದು ಬಿಟ್ಟರೆ ಬೇರೇನೂ ಇಲ್ಲದಿದ್ದ ಕೆಳವರ್ಗದ ಮತ್ತು ಕೆಳಜಾತಿಯ ಜನರಿಗೆ ಏನು ನಷ್ಟವಾಯಿತು? 'ವಿನಾಶ ಮತ್ತು ನಿರ್ನಾಮ'ಕ್ಕೆ ಒಳಗಾಗಲು ಅವರ ಹತ್ತಿರ ಏನಿತ್ತು? ಹೀಗೆ ನೋಡಿದಾಗ 'ವಿನಾಶ ಮತ್ತು ನಿರ್ನಾಮಗಳ' ಜೊತೆ 'ವಿಸ್ಮಯ ಮತ್ತು ಸಂಭ್ರಮಗಳೂ'; ಕೆಲವೆಡೆ ಬಿಡುಗಡೆಯ ಆಸೆಗಳೂ ಆಡಳಿತಕಾಲದ ಚಾರಿತ್ರಿಕ ಸತ್ಯಗಳೇ ಆಗಿದ್ದವು ಎಂದು ಹೇಳಬೇಕಾಗುತ್ತದೆ. ಈ ಬಗೆಯ ವೈರುಧ್ಯಗಳನ್ನು ನಮ್ಮ ಸಮಾಜ ಈಗಲೂ ಬಿಟ್ಟುಕೊಟ್ಟಿಲ್ಲ. ಹೀಗೆ ಒಂದೆಡೆ 'ವಿಷಾದ', ಇನ್ನೊಂದೆಡೆ 'ಸಂಭ್ರಮ'ಗಳ ನಡುವೆ ನಾಡು ಕ್ರಿಯಾಶೀಲವಾಗಿದ್ದಾಗ ಬರಹಗಾರರೇನು ಮಾಡಬೇಕು? ಅಥವಾ ಅವರ ಆಯ್ಕೆ ಯಾವುದಿರಬೇಕು? ಈ ಪ್ರಶ್ನೆಗೆ ಸರಳವಾಗಿ ಉತ್ತರಿಸಲಾಗದು. ಏಕೆಂದರೆ ಸೃಜನಶೀಲ ಪ್ರಕ್ರಿಯೆಯಲ್ಲಿ ಅಥವಾ ಯಾವುದೇ ಪುನರ್-ಸೃಷ್ಟಿ ಒಂದರಲ್ಲಿ ಇಂಥ ಸರಳತೆಯನ್ನು ಅಪೇಕ್ಷಿಸಲಾಗದು. ಕೆಲವರು ಕೇವಲ 'ಸಂಭ್ರಮ'ವನ್ನು, ಇನ್ನು ಕೆಲವರು 'ವಿಷಾದ'ವನ್ನು ಮತ್ತೆ ಕೆಲವರು ಸಂಭ್ರಮ-ವಿಷಾದ ಎರಡರನ್ನೂ ಒಳಗೊಳ್ಳಬಹುದು. ಹೀಗೆ ಮಾಡಿದರೂ ಅದರ ಪರಿಣಾಮ ಒಂದೇ. ಅವರೆಲ್ಲ ಒಂದಿಲ್ಲ ಒಂದು ಬಗೆಯಲ್ಲಿ ವಸಾಹತೀಕರಣಕ್ಕೆ ಒಳಗಾಗಿದ್ದಾರೆಂದೇ ಅರ್ಥ. ಅನಂತಮೂರ್ತಿಯವರು ಸ್ವಲ್ಪ ಬೇರೆ ರೀತಿಯಲ್ಲಿ ಅದನ್ನು ಮಂಡಿಸಿದ್ದಾರೆ - "ವ್ಯಾವಹಾರಿಕವಾಗಿ ಐರೋಪ್ಯ ಟೆಕ್ನಾಲಾಜಿಯನ್ನು ಮೋಹಿಸುವುದು, ಜೊತೆಗೆ ಸಾಂಸ್ಕೃತಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ಐರೋಪ್ಯವಾದದ್ದೆಲ್ಲವನ್ನು ದ್ವೇಷಿಸುವುದು ಕೂಡಾ ವಸಾಹತುಶಾಹಿ ಕಾಂಪ್ಲೆಕ್ಸ್‌ಗೆ ತುತ್ತಾದ ಮನಸ್ಸಿನ ರೋಗ ಲಕ್ಷಣಗಳಲ್ಲೊಂದು" (1990 : 24) ಈ ಮಾತು ಸ್ವತಃ ಅನಂತಮೂರ್ತಿಯವರು ತಮ್ಮ ಬಗ್ಗೆ ತಾವೇ ಮಾಡಿಕೊಂಡ ವ್ಯಾಖ್ಯಾನದಂತಿದೆ ಮತ್ತು ಈ ಅರ್ಥದಲ್ಲಿ ಅದು ವಸಾಹತೀಕರಣದ ವಿರೋಧ ದ್ವಂದ್ವಗಳನ್ನು ಸಮರ್ಪಕವಾಗಿ ನಿರ್ವಹಿಸುತ್ತದೆ.

ವಸಾಹತೀಕರಣ ಎಂಬುದೊಂದು ನಡೆದಿದೆ ಮತ್ತು ಅದು ನಮ್ಮ ನಡುವಿನ ಅನೇಕ ರಚನೆಗಳನ್ನು ನಾಶಮಾಡಿ ಹೊಸ ರಚನೆಗಳನ್ನು ಸೃಷ್ಟಿಸಿದೆ ಎಂಬ ಅರಿವಿನಲ್ಲಿ ಮೇಲಿನ ಮಾತುಗಳನ್ನು ಹೇಳಲಾಗುತ್ತಿದೆ. ವಸಾಹತೀಕರಣದ ಬಗ್ಗೆ ಏನೇನೂ ತಿಳುವಳಿಕೆ ಇಲ್ಲದ ಆದರೆ ಪಾರಂಪರಿಕವಾಗಿ ತುಂಬ ಗಟ್ಟಿ ಇರುವ ಮನುಷ್ಯ ಅಥವಾ ದೇಸೀ ಪ್ರಕಾರವೊಂದರ ಇದಿರು 'ವಸಾಹತೀಕರಣ' ಎಂಬ ಭೂತವನ್ನು ನಿಲ್ಲಿಸಿದರೆ ಏನಾಗುತ್ತದೆ ಎಂದು ನೋಡಿದಾಗ ಕುತೂಹಲಕರವಾದ ಅಂಶಗಳು ಮುಂದೆ ಬರುತ್ತವೆ. ಉದಾಹರಣೆಗೆ ದಕ್ಷಿಣ ಕನ್ನಡದಲ್ಲಿ ತುಂಬ ಜನಪ್ರಿಯವಾಗಿರುವ 'ಭೂತಾರಾಧನೆ'ಯಲ್ಲಿ ಭೂತದ ವೇಷ ಹಾಕುವ ಅಜಲಾಯನೊಬ್ಬನೆದುರು, ಬಾಸೆಲ್ ಮಿಶನ್ನಿನ ಪಂಡಿತರು ನಿಂತ ಸಂದರ್ಭವನ್ನು ನೆನಪಿಸಿಕೊಳ್ಳೋಣ. ಬಾಸೆಲ್ ಮಿಶನ್ನಿನ ಪಂಡಿತರು 'ಇದೇನು?' ಎಂದು ಆತನನ್ನು ಕೇಳಿದರು. ಅಜಲಾಯ 'ಭೂತ' ಎಂದ. ಪಂಡಿತರು Devil ಎಂದು ಬರೆದುಕೊಂಡರು. ಬ್ರೆಕೆಟ್‌ನಲ್ಲಿ ಯುರೋಪಿನಲ್ಲಿರುವಂತೆ ಎಂದು

ಟಿಪ್ಪಣಿ ಮಾಡಿಕೊಂಡರು. ಯಾಕೋ ಸಮಾಧಾನವಾಗಲಿಲ್ಲ. ಕೆಲವು ದಿನ ಬಿಟ್ಟು ಪುನಃ ಅದೇ ಪ್ರಶ್ನೆ ಕೇಳಿದರು, ಅಜಲಾಯ 'ಭೂತ' ಎಂದೇ ಇನ್ನೊಮ್ಮೆ ಉತ್ತರಕೊಟ್ಟ. ಪಂಡಿತರು ಈ ಬಾರಿ 'ಸೈತಾನ' ಎಂದು ಬರೆದುಕೊಂಡು "ಬೈಬಲ್ಲಿನಲ್ಲಿರುವಂತೆ" ಎಂದು ಬ್ರೆಕೆಟ್‌ನಲ್ಲಿ ನಮೂದಿಸಿಕೊಂಡರು. ಆದರೂ ಭೂತಾರಾಧನೆಯ ವಿವರಗಳನ್ನು ನೋಡಿದಾಗ ಇದೂ ಸಮರ್ಪಕ ಅಲ್ಲವೆಂದು ತಿಳಿದು ಮತ್ತೊಮ್ಮೆ ಅಜಲಾಯನನ್ನು ಕೇಳಿದರು "ನೀನು ಹಾಕಿರುವ ವೇಷ ಏನು?", ಯಾವುದೇ ಆತಂಕಗಳಿಲ್ಲದೆ ಅಜಲಾಯ ಮಗದೊಮ್ಮೆ ಉತ್ತರಿಸಿದ "ಭೂತ" ಎಂದು. ಬಾಸೆಲ್ ಶಾಸ್ತ್ರಿಗಳು ಈ ಸಲ "demon" ಎಂದು ಬರೆದುಕೊಂಡು ಬ್ರೆಕೆಟ್‌ನಲ್ಲಿ "ಹಿಂದೂ ಪುರಾಣಗಳಲ್ಲಿರುವಂತೆ" ಎಂದು ದಾಖಲಿಸಿಕೊಂಡರು. ಭೂತಾರಾಧನೆಯ ಕೊನೆಯಲ್ಲಿ ಭೂತವು 'ಅಭಯ ಪ್ರದಾನ' ಮಾಡುವುದನ್ನು ಕಂಡಾಗ ಬಾಸೆಲ್ ಶಾಸ್ತ್ರಿಗಳಿಗೆ ಮತ್ತೆ ಅನುಮಾನ ಉಂಟಾಯಿತು. ಹಿಂದೂ ಪುರಾಣಗಳಲ್ಲಿರುವ ದಾನವರು ಭಕ್ತರಿಗೆ ಅಭಯ ಪ್ರದಾನ ಮಾಡುವುದಾದರೂ ಹೇಗೆ? ಇದಕ್ಕೆ ಉತ್ತರ ಸಿಗದಿದ್ದಾಗ ಶಾಸ್ತ್ರಿಗಳೆಲ್ಲ ಮತ್ತೊಮ್ಮೆ ಒಟ್ಟು ಸೇರಿ ಕೊನೆಯ ಬಾರಿಗೆ ಭೂತಕ್ಕೆ ಕೈಮುಗಿದು ಕೇಳಿದರು "ನಿಜ ಹೇಳು, ನೀನು ಯಾರು?" ಭೂತವೇಷಧಾರಿ ಅಜಲಾಯ ಮತ್ತೊಮ್ಮೆ ಹೇಳಿದ "ಭೂತ" ಈಗ ಶಾಸ್ತ್ರಿಗಳೆಲ್ಲ ನಿರುಪಾಯರಾಗಿ ಭೂತ ಎಂದೇ ಬರಕೊಂಡರು. ಈ ಸಲ ಬ್ರೆಕೆಟ್ಟಲ್ಲಿ ಬರೆಯಲು ಅವರಿಗೆ ಏನೂ ಉಳಿಯಲಿಲ್ಲ. ವಸಾಹತು ಬೌದ್ಧಿಕತೆಯ ಮೇಲೆ ಭೂತವೇಷಧಾರಿ ಅಜಲಾಯ ಸಾಧಿಸಿದ ದಿಗ್ವಿಜಯದ ಕಥಾನಕವಿದು.

ಇನ್ನೊಂದು ಉದಾಹರಣೆಯನ್ನು ಗಮನಿಸೋಣ. ಅದು ಯಕ್ಷಗಾನದ್ದು. ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಸುಮಾರು 33 ವ್ಯವಸಾಯಿ ಮೇಳಗಳು ಕಳೆದ ವರ್ಷ ತಿರುಗಾಟ ನಡೆಸಿವೆ. ಈ ಮೇಳಗಳು ಆರು ತಿಂಗಳುಗಳ ಕಾಲ ನಿರಂತರವಾಗಿ ಪ್ರದರ್ಶನ ನೀಡುತ್ತವೆ. ಅಂದರೆ ವ್ಯವಸಾಯಿ ಮೇಳಗಳು ಸುಮಾರು 6000 ಪ್ರದರ್ಶನ ನೀಡಿದೆ ಎಂದಾಯಿತು. ಎರಡೂ ಜಿಲ್ಲೆಗಳಲ್ಲಿ 600ಕ್ಕೂ ಹೆಚ್ಚು ಹವ್ಯಾಸಿ ಮೇಳಗಳಿವೆ. ಏನಿಲ್ಲೆಂದರೂ ಪ್ರತಿ ತಂಡ ವರ್ಷಕ್ಕೆ ಸರಾಸರಿ 10 ಪ್ರದರ್ಶನ ನೀಡಿದರೂ ವರ್ಷಕ್ಕೆ 6000 ಪ್ರದರ್ಶನಗಳು ಹವ್ಯಾಸಿಗಳಿಂದ ನಡೆಯುತ್ತವೆ. ಮಳೆಗಾಲದ ಪ್ರದರ್ಶನಗಳನ್ನು ಸೇರಿಸಿದರೆ ಕಡಿಮೆ ಎಂದರೂ ವರುಷಕ್ಕೆ ಒಟ್ಟು 12,500 ಯಕ್ಷಗಾನ ಪ್ರದರ್ಶನ ನಡೆಯುತ್ತದೆ. ಪ್ರತಿ ಪ್ರದರ್ಶನಕ್ಕೆ 500 ಪ್ರೇಕ್ಷಕರು (500 ಪ್ರೇಕ್ಷಕರಿಲ್ಲದಿದ್ದರೆ ಪ್ರದರ್ಶನದ ಖರ್ಚು ಹುಟ್ಟುವುದಿಲ್ಲ) ಬರುತ್ತಾರೆ ಎಂದರೂ ವರ್ಷವೊಂದಕ್ಕೆ ಸುಮಾರು 63 ಲಕ್ಷ ಜನ ಯಕ್ಷಗಾನ ನೋಡುತ್ತಾರೆ. ಉಳಿದಂತೆ ಒಂದು ಮೇಳದಲ್ಲಿ ಸರಾಸರಿ 20 ನಟರಿರುತ್ತಾರೆ ಎಂದರೂ ಒಟ್ಟು 13 ಸಾವಿರ ಕಲಾವಿದರು ಇದ್ದಂತಾಯಿತು. ಇಷ್ಟು ಬೃಹತ್ತಾದ ಇನ್ನೊಂದು ರಂಗಭೂಮಿಯು ಜಗತ್ತಿನಲ್ಲಿ ಬೇರೆಲ್ಲಾದರೂ ಇರುವುದು ನನಗೆ ಗೊತ್ತಿಲ್ಲ. ಇಂಥ ಬೃಹತ್ ರಂಗಭೂಮಿಯು ಇಂದಿಗೂ ಇಂಗ್ಲೀಷನ್ನು ಪೂರ್ತಿ ಹೊರಗಿಟ್ಟಿದೆ. ಸುಮಾರು ಎಂಟು ಗಂಟೆಗಳ ಕಾಲ ನಿರಂತರವಾಗಿ ಪ್ರದರ್ಶನಗೊಳ್ಳುವ ಈ ರಂಗಭೂಮಿಯು ತನ್ನ ಅಭಿವ್ಯಕ್ತಿಗೆ ಬೇಕಾದ ಸಾಮರ್ಥ್ಯವನ್ನು ಕನ್ನಡ ಮತ್ತು ತುಳುವಿನಿಂದಲೇ ಗಿಟ್ಟಿಸಿಕೊಂಡಿದೆ. ಇಂಗ್ಲೀಷಿನ ಅಹಂಕಾರವನ್ನು ಕನ್ನಡ ಮತ್ತು ತುಳು ಭಾಷೆಗಳು ಮರ್ದಿಸಿದ ರೋಚಕ ಅಧ್ಯಾಯವಿದು.

ವಸಾಹತು ಆಡಳಿತಕ್ಕೆ ಸಂಬಂಧಿಸಿದಂತೆ ಮೂರು ಬಗೆಯ ಪ್ರತಿಕ್ರಿಯೆಗಳು ಕ್ರಿಯಾ ಶೀಲವಾಗಿರುವುದನ್ನು ಮೇಲೆ ಹೇಳಿದ ಉದಾಹರಣೆಗಳು ಪ್ರಸ್ತುತ ಪಡಿಸುತ್ತವೆ. ಅದನ್ನು ಭಯ, ಸಂಭ್ರಮ ಮತ್ತು ನಿರ್ಲಕ್ಷ್ಯ ಎಂದು ಸಂಕ್ಷೇಪಿಸಿ ಹೇಳಬಹುದು. ಈ ಮೂರು ಪರಸ್ಪರ ವಿರುದ್ಧ ಸ್ವಭಾವವನ್ನು ಹೊಂದಿದ್ದೂ ನಮ್ಮ ಚರಿತ್ರೆಯ ಭಿನ್ನ ಸಂಕಥನಗಳಾಗಿವೆ.

ಈ ಹಿನ್ನೆಲೆಯಲ್ಲಿ ಈಗ ನೇರವಾಗಿ ಡಾ. ಕಂಬಾರರ ನಾಟಕಗಳಲ್ಲಿನ ವಸಾಹತುಶಾಹಿಯ ಸ್ವರೂಪ ಗ್ರಹಿಕೆಯತ್ತ ಚಲಿಸಬಹುದು. ಕಂಬಾರರು ಎರಡು ಬಗೆಯ ನಾಟಕಗಳನ್ನು ಬರೆದಿದ್ದಾರೆ. ಹರಕೆಯ ಕುರಿ, ಚಾಳೇಶ, ನಾರ್ಸಿಸಸ್, ಜೈಸಿದನಾಯ್ಕ ಮೊದಲಾದುವು ಒಂದು ಬಗೆಯ ನಾಟಕಗಳಾದರೆ ಸಂಗ್ಯಾಬಾಳ್ಯಾ, ಋಷ್ಯಶೃಂಗ, ಜೋಕುಮಾರಸ್ವಾಮಿ, ಕಾಡುಕುದುರೆ, ಸಿರಿಸಂಪಿಗೆ, ಹುಲಿಯ ನೆರಳು ಮೊದಲಾದುವು ಇನ್ನೊಂದು ಬಗೆಯ ನಾಟಕಗಳಾಗಿವೆ. ವಸ್ತುವಿನ ನಿರ್ವಹಣೆ ಮತ್ತು ಭಾಷಾ ಬಳಕೆಯ ದೃಷ್ಟಿಯಿಂದ ಇವೆರಡೂ ಪರಸ್ಪರ ವಿರೋಧವಾಗಿವೆ ಎಂದು ಅನ್ನಿಸಿದರೂ ಸೂಕ್ಷ್ಮವಾಗಿ ನೋಡಿದಾಗ ಹಾಗನ್ನಿಸುವುದಿಲ್ಲ. ಆಧುನಿಕತೆಯು ನಿರ್ದಯವಾಗಿ ಹೊಸಕಿ ಹಾಕಿರುವ ವ್ಯಕ್ತಿತ್ವಗಳು ಮತ್ತು ಅಂಥ ವ್ಯಕ್ತಿತ್ವಗಳು 'ನೆರಳಿಲ್ಲದ ಸತ್ಯಕ್ಕಾಗಿ' ತಡಕಾಡುವಾಗ ಉಂಟಾಗುವ ವಿಹ್ವಲತೆ, ತಲ್ಲಣಗಳನ್ನು ಅವರ ಎರಡೂ ಬಗೆಯ ನಾಟಕಗಳು ಅದ್ಭುತವಾಗಿ ದಾಖಲಿಸುತ್ತವೆ. ತುಕ್ರನ ಕನಸು ನಾಟಕದ ಕೊನೆಯಲ್ಲಿ ಬರುವ ಸಾವಿನ ಸುಳಿವುಳ್ಳ ಮಾತುಗಳು ಇಂತಿವೆ.

"ನನ್ನ ಪ್ರೀತಿಯ ತಮ್ಮ, ನಾನಂತೂ ಈ ಕನಸುಗಳ ಬೆನ್ನ ಹಿಂದೆಯೇ ಇಷ್ಟು ವರ್ಷ ಬದುಕಿದೆ. ಅವನ್ನು ಕುರಿತು ಹಾಡಿದೆ, ಕುಣಿದೆ, ಪ್ರತಿಭಟಿಸಿದೆ, ಶಾಪಹಾಕಿದೆ, ಈಗ ಇಲ್ಲಿದ್ದೇನೆ. ನನ್ನ ಅನುಭವವನ್ನು ನಿನ್ನಂಥ ಎಳೆಯರಿಗೆ ಹೇಳಬೇಕು, ಹೇಳೋದಕ್ಕೆ ನಾಚಿಕೆ ಯಾಕೆಂದರೆ ನನ್ನ ಕನಸುಗಳಿಗಾಗಲೇ ವಯಸ್ಸಾಗಿದೆ. ಕಣ್ಣು ಕಾಣೋದಿಲ್ಲ. ಹಲ್ಲಿಲ್ಲ. ಮಾತಾಡೋದಕ್ಕೆ ಬಾಯಿ ತೆಗೆದಾಗಲೆಲ್ಲ ಗುರುಗುರು ಅನ್ನೋದು ನಿನಗೆ ಕೇಳಿಸುತ್ತದಲ್ಲವೇ? ಅವೆಲ್ಲ ಬಂಜೆಗನಸು ಯಾಕೆಂದರೆ ನನಗವು ಸೊನ್ನೆ ಬರೆಯೋದನ್ನ ಕಲಿಸಲೇ ಇಲ್ಲ. ನೀನು ಮಾತ್ರ ನೆನಪಿಡು ತಮ್ಮ -ನೀನು ನಡೆವ ದಾರಿಯ ಇಕ್ಕೆಲಗಳಲ್ಲಿ ಸಮೃದ್ಧಿಯಾಗಿ ಬೆಳೆದ ಕನಸುಗಳು ಇರುವಂತೆ ನೋಡಿಕೋ, ಹಾಗೆಯೇ ಅವು ಕೊನೆ ಪಕ್ಷ ನಿನಗೊಂದು ಸುಂದರ ಸೊನ್ನೆ ಬರೆಯುವಷ್ಟನ್ನಾದರೂ ಕಲಿಸುವಂತೆ ನೋಡಿಕೋ" ತಿಳಿಯಿತಲ್ಲ? (1992 : 80)

ಹುಲಿಯ ನೆರಳಿನ ರಾಮಗೊಂಡನ ಚೀರಾಟ ಇಂತಿದೆ.

"ಒಂದೊಂದು ಸತ್ಯಕ್ಕೆ ದಾರಿ ತಪ್ಪಿಸುವ ಸಾವಿರ ದಾರಿಗಳು, ಯಾವುದನ್ನು ಹಿಡೀಲಿ ಯಾವುದನ್ನು ಬಿಡಲಿ? ಸೂರ್ಯನಂಥ ಸೂರ್ಯನಿಗೂ ಮನುಷ್ಯ ಮತ್ತವನ ಭೂತಗಳನ್ನು ಬ್ಯಾರೇ ಮಾಡಿ ತೋರಿಸಲಿಕ್ಕಾಗಲೇ ಇಲ್ಲ. ಯಾರನ್ನಂತ ನಂಬಲಿ? ಅಪ್ಪಾ, ಸೂರ್ಯನ್ನ ಮೀರಿದ ಬೆಳಕಿನ ಸ್ವಾಮೀ, ಈ ಲೋಕವನ್ನು ಅಖಂಡ ಸತ್ಯವಾಗಿ ತೋರಿಸೋ ತಂದೆ, ನನ್ನ ಗೊಂದಲ ಬಗೆಹರಿಸೋ ತಂದೆ. ನೆರಳಿಲ್ಲದ ಸತ್ಯ ತೋರಿಸೋ ತಂದೆ.... (1990 : 57)

ತುಕ್ರ ಮತ್ತು ರಾಮಗೊಂಡರು ಕಂಬಾರರ ನಾಟಕಗಳಿಗೆ ಬರೆದ ಕಾವ್ಯದಂಥಾ ಪ್ರಣಾಳಿಕೆಯಿದು.

ಕಂಬಾರರ ನಾಟಕಗಳಲ್ಲಿನ 'ವಸಾಹತು ಕಲ್ಪನೆ' ಈ ಬಗೆಯ ಹುಡುಕಾಟ ಮತ್ತು ಗೊಂದಲಗಳಿಂದ ನಿಷ್ಪನ್ನಗೊಂಡಿದೆ. ಅವರ ವಸಾಹತು ಕಲ್ಪನೆಯು ಪ್ರತೀತಗೊಳ್ಳುವುದು ನಾನು ಹಿಂದೆ ಹೇಳಿದ ಭಯ, ಸಂಭ್ರಮ ಮತ್ತು ನಿರ್ಲಕ್ಷ್ಯಗಳ ತಾರ್ಕಿಕ ಸಮನ್ವಯದಲ್ಲಿ ಇದೊಂದು ಅಪೂರ್ವ ಘಟನೆಯಾಗಿದೆ ಮತ್ತು ಇಂಥ ಘಟನೆಗಳು ಈ ನಾಡಿನ ಸೃಜನಶೀಲ ಲೋಕದಲ್ಲಿ ಹೆಚ್ಚು ಸಂಭವಿಸಿದಂತಿಲ್ಲ. ಮೊದಲಿಗೆ ಅಲ್ಲಮಪ್ರಭುವಿಗೆ ಶರಣಾರ್ಥಿ ಎಂದು ಕಂಬಾರರು ಕನ್ನಡದ ಶಕ್ತಿ ಮೂಲವೊಂದಕ್ಕೆ ಲಗ್ಗೆ ಹಾಕಿ ಸಂಭ್ರಮಿಸುತ್ತಾರೆ. ಪಾರೆಂಬಿ ಕರ್ಯೆವ್ವನ ನಿರ್ನಾಮಕ್ಕೆ ಭಯಪಡುತ್ತಾರೆ ಮತ್ತು ಮುದಿ ಪಾದ್ರಿಯ ಪ್ರಣಯದ ಬಗ್ಗೆ ಲೇವಡಿಯ ಹಾಡು ಹಾಡುತ್ತ ಮಠಾಧಿಪತಿಗಳ ಕಾಮಕೇಳಿಯ ಬಗ್ಗೆ ಅವರು ದಿವ್ಯ ನಿರ್ಲಕ್ಷ್ಯ ತಾಳುತ್ತಾರೆ.

ಇದಿಷ್ಟೂ ಕಂಬಾರರ ಎಲ್ಲ ನಾಟಕಗಳನ್ನೂ ಗಮನದಲ್ಲಿರಿಸಿಕೊಂಡು ಹೇಳಬಹುದಾದ ಮಾತುಗಳಾಗಿವೆ. ಅವರ ನಾಟಕಗಳ ವಿಶಾಲಭಿತ್ತಿಯಲ್ಲಿ ಕಾಣುವ ಮುಖ್ಯ ಅಂಶಗಳಿವು. ಈಗ ಅವರ 'ಹುಲಿಯ ನೆರಳು' ಮತ್ತು 'ತುಕ್ರನ ಕನಸು' ನಾಟಕಗಳನ್ನು ಗಮನದಲ್ಲಿರಿಸಿಕೊಂಡು ಈ ಚರ್ಚೆಯನ್ನು ಇನ್ನಷ್ಟು ಮುಂದುವರಿಸಬಹುದಾಗಿದೆ ಮತ್ತು ಸೂಕ್ಷ್ಮಗೊಳಿಸಬಹುದಾಗಿದೆ.

'ಹುಲಿಯ ನೆರಳು' ನಾಟಕದಲ್ಲಿನ ವಸಾಹತುಶಾಹಿ ಸ್ವರೂಪವು ಆರಂಭದಲ್ಲಿ ಸರಳ ರೂಪದಲ್ಲಿದ್ದು ನಾಟಕ ಕೊನೆಯಾದಾಗ ಅತ್ಯಂತ ಸಂಕೀರ್ಣ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ವಸಾಹತುಶಾಹಿಯ ಆಗಮನದ ಬಗ್ಗೆ ನಾಟಕದ ಆರಂಭದಲ್ಲಿಯೇ ಸೂತ್ರಧಾರ ಆತಂಕವನ್ನು ವ್ಯಕ್ತಪಡಿಸುತ್ತಾನೆ.

**"ಕಿವಿಗೊಟ್ಟು ಕೇಳಿರಿ ಹಟ್ಟಿಯ ಕುಳಗಳೇ**
**ಬರಲಿದ್ದಾನೆ ಕರಿಕುದುರೆಯೇರಿ ನಗರದ ಖಳನಾಯಕ**
**ಕ್ಷಣದಲ್ಲಿ ಮರದಲೆ ಎಣಿಸುವಾತ**
**ಮೆದುಳನ್ನೆ ತಿಂದು ಬದುಕಬಲ್ಲಾತ**
**ನೆಲಮುಗಿಲಿಗೆ ಒಡೆಯನಾಗಿ, ದೇವರ ಜೊತೆ**
**ಹುಡುಕಾಟವಾಡ ಬಯಸುವಾತ**
**ರಾಜ್ಯ ವಿಸ್ತರಿಸುತ್ತ**
**ಹಳ್ಳಿಯ ದರೋಡೆಗೆ ಹೊಂಚನಿಂತ ಹೊಟ್ಟೆಬಾಕ ಬಕ**
**ಹೆಂಗಸರೆಲ್ಲ ಮನೆಯೊಳಕ್ಕಿರಲಿ**
**ಹಣೆಕೆ ಹಾಕಿದರೂ ದಂಡ ಶಿಕ್ಷೆಗುಳೆಂಟೆಂದು ತಿಳಿದಿರಲಿ**
**ಗಂಡಸರು ಆಯುಧಗಳ ಬಚ್ಚಿಟ್ಟಿರಲಿ**
**ಸಂದೇಹ ಬರುವಂತೆ ಯಾರೂ ನಗದಿರಲಿ**
**ಕಣ್ಣಿನ ಕಪಟ ಪ್ರಕಟವಾಗದ ಹಾಗೆ ಅಭಿನಯವಿರಲಿ"** **(ಪುಟ : 4)**

ಈ ವಾರ್ತೆಯು ನಾಡಿನ ಜನರನ್ನು ತಲ್ಲಣಗೊಳಿಸುತ್ತದೆ. ಆಶ್ಚರ್ಯ ಎಂದರೆ ನಗರದ ಖಳನಾಯಕ ಹೀಗೆ ವ್ಯಕ್ತವಾಗಿ ಬಂದಿದ್ದರೆ, ಜನರಿಗದು ಅರ್ಥವಾಗುತ್ತಿತ್ತೋ ಏನೋ? ಆದರೆ ಖಳನಾಯಕನು ಏಳು ಪಟ್ಟೆಯ ಹುಲಿಯ ರೂಪದಲ್ಲಿ, ಪರಿವರ್ತನೆ ಹೊಂದಿ, ಕಾಳ ರಾತ್ರಿಯಲ್ಲಿ ಕೊಟ್ಟಿಗೆಯ ದನ ತಿಂದು, ಹಟ್ಟಿಯ ಕೂಸು ಕುನ್ನಿಗಳ ತಿಂದು ಅಟ್ಟಿಸಿ ಕಾಡುತ್ತದೆ. ಗ್ರಾಮದ ಸುಖಸಮೃದ್ಧಿಗಳನ್ನು ಕಾಪಾಡಿಕೊಂಡಿದ್ದ ಗೌಡ, ಬೇಟೆಗೆ ಹೋಗುತ್ತಾನೆ. ಬೇಟೆಯಲ್ಲಿ ರಾಕ್ಷಸೀ ಶಕ್ತಿಯೊಂದು ಗೌಡನನ್ನು ಸಾಯಿಸಿ, ಬಾವಿಗೆ ಹಾಕಿ 'ಭೂತ'ವಾಗಿಸಿ ಗೌಡನ ವೇಷದಲ್ಲಿ ನಾಡನ್ನು ಪ್ರವೇಶಿಸುತ್ತದೆ. ರಾಕ್ಷಸೀ ಶಕ್ತಿಯು ನಾಡಿನಲ್ಲಿ ಅಸಹನೀಯ ಪರಿವರ್ತನೆಗಳನ್ನುಂಟು ಮಾಡುತ್ತದೆ. ಈ ಪರಿವರ್ತನೆಯ ಕುತ್ಸಿತ ಪರಿಣಾಮವೆಂದರೆ ಕರಿಮಾಯಿ ಮರದ ನಿರ್ನಾಮ ಮತ್ತು ಅದನ್ನೆ ನಂಬಿ ಕುಳಿತಿದ್ದ ಕರಿಯಜ್ಜನ ಹೀನಾಯ ಸಾವು ಸೂತ್ರಧಾರ ಹಾಡುತ್ತಾನೆ.

**"ಊರಿಗೂರ ಕತ್ತಲಾಗ ಅಡಗಿಬಿಟ್ಟಿತ್ತು**
**ಎಂದೆಂದೂ ಮಾಗದ ನೋವು ತಂದಿತ್ತು**
**ಸಕಾಲಕ್ಕೆ ಮುಂಜಾನೆಯೇನೋ ಬಂತು**
**ಆದರೆ ಹೊಸ ಮುಂಜಾನೆ ಹೊಸ ಆಸೆ ತರಲಿಲ್ಲ**

ಮನಸು ಮನಸ್ಸಿನ ನಡುವೆ ಅಡ್ಡಗೆರಿ ಮೂಡಿದ್ದವು
ಮನೆ ಮನೆ ನಡುವೆ ಅಡ್ಡಗೋಡೆ ಎದ್ದಿದ್ದವು
ನಮ್ಮ ನೆರಳು ನೋಡಿ ನಮಗೆ ಆಶ್ಚರ್ಯ ಆಗತ್ತಿತ್ತು
ಇವು ನಮ್ಮ ನೆರಳೇನು ಅಂತ

ಇದು ನಮ್ಮ ಊರೇನು ಅಂತ
ನಾವೆಲ್ಲ ನಾವೇನು ಅಂತ" (ಪು : 20)

ಈ ದಿಗಿಲಿನಲ್ಲಿ ನಿಜವಾದ ಗೌಡನ ಮಗನಾದ ರಾಮಗೊಂಡನು ಸತ್ಯಾನ್ವೇಷಣೆಗೆ ಹೊರಡುತ್ತಾನೆ. 'ಬಯಲಾಟದ ಬಣ್ಣ ದಾಟಿ ಎಲ್ಲರ ನಿಜ ಮುಖ ಕಾಣಬಯಸುವ ಆತನಲ್ಲಿಯೂ ಬೆಳಕು ಕಾಣದ ದಿಗ್ಭ್ರಮೆಯಿದೆ, ನಿಜ ತಿಳಿಯಲಾರದ ಹತಾಶತೆಯಿದೆ. ಸತ್ತರೂ ಬೆನ್ನಟ್ಟಿ ಬರುವ ಕಥೆಗಳಿಂದ ಅವನಿಗೂ ಬಿಡುಗಡೆಯಿಲ್ಲ 'ಅಮ್ಮನ ಕಣ್ಣಲ್ಲಿ ಕಾಡಿನ ಹಸಿರನ್ನು, ಮುಗಿಲಿನ ಚಂದ್ರನನ್ನು 'ಕಾಣಬಲ್ಲ ಅವನಿಗೆ ಮಾಯದಕನ್ನಡಿ ಇದ್ದರೂ ವೈರಿಯನ್ನು ಕಾಣಲಾಗುವುದಿಲ್ಲ. ಇರಿಯೋ ಕೊಂಬಿದ್ದರೂ ರಾಕ್ಷಸನನ್ನು ಕೊಲ್ಲಲಾಗುವುದಿಲ್ಲ ಮತ್ತು ಕೀಲುಕುದುರಿ ಇದ್ದರೂ ಅದನ್ನು ಸವಾರಿ ಮಾಡಲಾಗುವುದಿಲ್ಲ. ನಾಟಕ ಕೊನೆಯಾದಾಗ ಆತ ಪಶ್ಚತ್ತಾಪ ಪಡುತ್ತ, ಕಾಡಿನಲ್ಲಿ ಶತಪತ ಹಾಕುತ್ತಾ ತಿರುಗುವ ಶಾಪಕ್ಕೆ ಒಳಗಾಗುತ್ತಾನೆ. ಮುಂಚಿನ ಸುಖಸ್ಥಿತಿಗೆ ಮತ್ತೆ ಹಿಂದಿರುಗಲಾರದ ವಿಷಾದದಲ್ಲಿ ನಾಟಕ ಮುಕ್ತಾಯವಾಗುತ್ತದೆ.

ಇಡೀ ನಾಟಕದಲ್ಲಿ ಅತ್ಯಂತ ಬಿಕ್ಕಟ್ಟಿನ ಕ್ಷಣಗಳೆಂದು ತೋರುವ ಎರಡು ಘಟನೆಗಳು ಇಲ್ಲಿ ಉಲ್ಲೇಖಾರ್ಹವಾಗಿವೆ. ಗೌಡನ ವೇಷದಲ್ಲಿ ರಾಕ್ಷಸನ ಆಗಮನವಾಗುವುದು ಸಂಕಟದ ಒಂದು ಘಟನೆಯಾದರೆ ಆ ರಾಕ್ಷಸನೇ ತಂದೆಯ ವೇಷದಲ್ಲಿ ಬಂದು ಕೊನೆಗೆ ರಾಮಗೊಂಡನ ತದ್ರೂಪವಾಗಿ ಮಾರ್ಪಡುವುದು ಸಂಕಟದ ಎರಡನೇ ಆವೃತ್ತಿಯಾಗಿದೆ. ಮೊದಲನೆಯದು ಪರಕೀಯವಾದ ಭಯಾನಕ ಶಕ್ತಿಯೊಂದು ದೇಸೀ ರೂಪದಲ್ಲಿಯೇ ಪ್ರತ್ಯಕ್ಷವಾಗಿ ಸಂಸ್ಕೃತಿಯೊಂದನ್ನು ವಂಚಿಸುವ ಹುನ್ನಾರಕ್ಕೆ ಸಂಕೇತಿಸುತ್ತದೆ. ವಸಾಹತುಶಾಹಿಯ ಆಕ್ರಮಣ ಮತ್ತು ಪ್ರಸರಣವನ್ನು ಸಮರ್ಥವಾಗಿ ಪ್ರಕಟಿಸುವ ರೂಪಕವಿದು. ಇವಿಷ್ಟೂ ಅದ್ಭುತವಾದ ಕಲ್ಪನೆಯೇ ಸರಿ. ಆದರೆ ಇಂಥ ಭಯಾನಕ ವಸಾಹತುಶಾಹಿಯ ವಿರುದ್ಧವಾಗಿ ಕಂಬಾರರು ನಿಲ್ಲಿಸುವ ಶಕ್ತಿ ಮೂಲಗಳು ಯಾವುವು? ಭೂತ ಹೇಳುವ ಮಾತುಗಳನ್ನು ಗಮನಿಸೋಣ.

"ಮೂಡದಿಕ್ಕಿನ ಏಳುಕೊಳ್ಳದಾಗ ಒಂದು ಆಲದ ಮರ ಐತಿ. ಮರದ ಪೊದರಿನಾಗೊಂದು ಕತ್ತಲದ ಅರಮನಿ ಐತಿ. ಅಲ್ಲಿ ಪಂಜರದಾಗ ಒಂದು ಗಿಣಿ ಐತಿ. ಅದರಾಗ ಅವನ ಜೀವ ಐತಿ. ಅದನ್ನು ಕೊಂದರೆ ಅವ ತನ್ನ ನಿಜ ರೂಪದಾಗ ಸಾಯತಾನ. ಅಲ್ಲಿ ಒಬ್ಬ ಸಾಧು ಶರಣ ಇದ್ದಾನ, ಅವ ಮಂತ್ರಿಸಿದ ನೀರ ಕೊಡತಾನ, ಅದನ್ನ ತಂದ ನನ್ನ ಮ್ಯಾಲ ಸಿಂಪಡಿಸಿದರ ನನ್ನ ಆತ್ಮಕ್ಕೆ ಶಾಂತಿ ಸಿಗತೈತೊ ಮಗನ" (1990 : 39)

ಸೂತ್ರಧಾರನ ಮಾತುಗಳು ಇಂತಿವೆ.

"ಈಗ ನಮಗಿದ್ದ ಆಶ್ರಯ ಒಂದೇ ಕರಿಮಾಯ ಮರ
ನಮಗೆಲ್ಲೋ ಗಾಯವಾಗಿತ್ತು
ಅದರ ಮ್ಯಾಲ ಪಾರಂಬಿ ನೆರಳುಕವಿದು ಅದು ಕಾಣದ

ಹಾಂಗ ಮಾಡತಿತ್ತು
ನೆರಳ ಬಿಟ್ಟ ಹೊರಗಡೆ ಬಂದರೆ ಸಾಕು
ಗಾಯದ ಭಯ ನಮ್ಮನ್ನು ಮುಕ್ಕಿ ತಿಂತಿತ್ತು." (1990 : 23)

ಕರಿಯಜ್ಜನ ಮಾತುಗಳಿವು

"ಧರೆಯ ಮ್ಯಾಲಿನ ಧರ್ಮ ಆರಿಹೋಗೇತ್ಯೋ ತಮ್ಮ
ಮೊದಲಾದರ ನಿಮ್ಮಪ್ಪ ಎದ್ದಾಗ ತಾಯೀ ಅಂತಿದ್ದ
ಬಿದ್ದಾಗ ತಾಯಿ ಅಂತಿದ್ದ, ಮುಗ್ಗರಾದರೂ
ತಾಯೀ ಅಂತಿದ್ದ, ಹುಲೀ ಬ್ಯಾಟಿಗೆ ಹೋಗಿ ಬಂದ
ನೋಡು, ತಾಯೀನ್ನ ಕಸಕಡ್ಡಿ ಮಾಡಿಟ್ಟ" (1990 : 26)

ರಾಮಗೊಂಡ ಹಿಂದಿರುಗ ಬಯಸುವ ಲೋಕವಿದು. ಅಲ್ಲಿ ಆಧುನಿಕ ಜಗತ್ತು ಸಂದೇಹಿಸುವ ಒಪ್ಪದಿರುವ ಜ್ಞಾನವಿದೆ. ನಗರಕೇಂದ್ರಿತ ಚಿಂತನೆಗಳು ಮುಗ್ಧವೆಂದು ವರ್ಣಿಸುವ ಮೂಢನಂಬಿಕೆಗಳಿವೆ. ಗೌಡ್ತಿಗೆ ಬೀಳುವ ಕೆಟ್ಟ ಕನಸು ಮರುದಿನದ ವಾಸ್ತವದಲ್ಲಿ ನಿಜವಾಗುವಂಥ, ಪಾರಂಬಿ ಕರ್ತವ್ಯನನ್ನು, ಧಿಕ್ಕರಿಸಿದರೆ ದುರಂತವಾಗುವಂಥ, ಆರತಿ ದೀಪ ಕೆಟ್ಟರೆ, ಹದ್ದು ಹಾರಿದರೆ, ತಾಯಿ ವಾಕ್ಯ ಆಗದಿದ್ದರೆ, ಉಲ್ಕಿ ಬಿದ್ದರೆ, ಸಂಭವಿಸುವಂಥ ಅನಾಹುತಗಳ ವಿವರಗಳಿವೆ. ಹಾಗೆ ನೋಡಿದರೆ ಇಂಥ ವಿವರಗಳು ಪ್ರತೀತಗೊಳಿಸುವ ದೌರ್ಬಲ್ಯವೇ ರಾಕ್ಷಸನ ಆಗಮನಕ್ಕೆ ಕಾರಣವಾದ ಅಂಶವಾಗಿದೆ. ಗೌಡನ ಆಳ್ವಿಕೆಯಲ್ಲಿ ನಿಜವಾಗಲೂ ನಾಡು ಸುಭಿಕ್ಷವಾಗಿದ್ದುದು ಹೌದಾಗಿದ್ದರೆ ಅಂಥ ಸುಭಿಕ್ಷೆ ತಂದೀಯುವ ಶಕ್ತಿ ವ್ಯೂಹವನ್ನು ಮುರಿಯಲು ರಾಕ್ಷಸನಿಗೆ ಸಾಧ್ಯವಾಗುತ್ತಲೇ ಇರಲಿಲ್ಲ. ಹೀಗೆ ನೋಡಿದಾಗ ವಸಾಹತು ರಾಕ್ಷಸನ ವಿರುದ್ಧವಾಗಿ ನಿಲ್ಲಬಯಸಿದ ಲೋಕವೊಂದರ ದೌರ್ಬಲ್ಯಗಳೆಲ್ಲ ತಾನೇ ತಾನಾಗಿ ಮುನ್ನೆಲೆಗೆ ಬಂದು ಬಿಡುತ್ತದೆ. ಕಟುಕ ಹುಡುಗಿಗೆ ಹೇಳುವ ಕೀಲುಕುದುರೆಯ ಕತೆ, ಮತ್ತು ಆ ಸುಳ್ಳು ಕತೆಗೆ ಸುಲಭವಾಗಿ ಮೋಹಗೊಳ್ಳುವ ಹುಡುಗಿ-ಸಂಸ್ಕೃತಿಯೊಂದರ ಪತನಮುಖೀ ಚಲನೆಯನ್ನೇ ಸಂಕೇತಿಸುತ್ತದೆ.

ಹೀಗೆ 'ಹುಲಿಯ ನೆರಳು' ನಾಟಕವು ಅನ್ಯಾಕ್ರಮಣವನ್ನು ಅತ್ಯಂತ ಬಲಿಷ್ಠವಾದ ರೂಪಕಗಳಲ್ಲಿ ಹಿಡಿದಿಟ್ಟಿದೆ ಮತ್ತು ಇಂಥ ಆಕ್ರಮಣಗಳು ಹುಟ್ಟಿಸುವ ಭಯವು, ಪರಂಪರೆಯನ್ನು ಅ-ವಿಮರ್ಶಾತ್ಮಕವಾಗಿ ಒಪ್ಪಿಕೊಳ್ಳುವ ಹಾಗೆ ಮಾಡುವ ಅಪಾಯದ ಬಗೆಗೂ ಕೆಲವು ಸುಳಿವುಗಳನ್ನು ನೀಡುತ್ತದೆ. ಈ ಮಾತನ್ನು ಜಾನಪದದಿಂದ ಪ್ರೇರಣೆ ಪಡೆದ ಕಂಬಾರರ ಇತರ ನಾಟಕಗಳಿಗೂ ಅನ್ವಯಿಸಬಹುದಾಗಿದೆ.

'ತುಕ್ರನ ಕನಸು' ನಾಟಕವು ವಸಾಹತುಶಾಹಿಯ ಪ್ರವೇಶವನ್ನು ಇನ್ನೊಂದೇ ರೀತಿಯಲ್ಲಿ ಮಂಡಿಸುತ್ತದೆ. ನಾಟಕದಾರಂಭದಲ್ಲಿ ತುಕ್ರ ಹೀಗನ್ನುತ್ತಾನೆ.

"ಬಂಡಿಗಾಲಿಯ ಅಡಿಯಲ್ಲಿ ಸಿಕ್ಕ ಹುಲ್ಲಿಗೆ ನಾಲಿಗೆ ಇಲ್ಲ ನಿಜ. ಆದರೆ ಅದೇನಾದರೂ ಮಾತಾಡಿದ್ದರೆ ನನ್ನ ಹಾಗೆ ಮಾತಾಡುತ್ತಿತ್ತು. ಅಥವಾ ನನಗಿಂತ ಚೆನ್ನಾಗಿ ಮಾತಾಡುತ್ತಿತ್ತು ಅಥವಾ ನನ್ನ ಹಾಗೆ ಅರ್ಥವಿಲ್ಲದ ಆದರೆ ನೋವಿನಿಂದ ತುಂಬಿದ ಶಬ್ದಗಳನ್ನು ಒದರುತ್ತಿತ್ತು. ಅಲ್ಲವೇ? ಹುಲ್ಲು ಅಂದರೆ ಸಾಮಾನ್ಯ ಅಂತ ತಿಳಿಯಬೇಡಿ ಸ್ವಾಮೀ, ಆದರ್ಶಮಯವಾದ ಹುಲ್ಲು ಗುಲಾಮನ ಸೊಂಟದಂತಿರಬೇಕು, ಯಾವಾಗೆಂದರೆ ಆವಾಗ, ಹ್ಯಾಗೆಂದರೆ ಹಾಗೆ ಎಷ್ಟು ಬೇಗ ಮತ್ತು ನಿಧಾನವಾಗಿಯೆಂದರೆ ಅಷ್ಟು ಬೇಗ ಮತ್ತು ನಿಧಾನವಾಗಿ ಬಗ್ಗುವಂತಿರಬೇಕು. ತುಳಿದರೆ ಮಿದುವಾಗಿರಬೇಕು. ತಟ್ಟಿದರೆ ಯಾವ ಕಡೆಗೂ ತಿರುಚಿಕೊಳ್ಳುವಂತಿರಬೇಕು......ಒಮ್ಮೊಮ್ಮೆ ಈ

ನೆಲ ಸಾವಿರಾರು ವರ್ಷಗಳಿಂದ ಕಂಡ ಕನಸು ನಾನೆಂದೋ, ಕನಸಿನಲ್ಲಿ ಈ ನೆಲ ಉಂಡ ನೋವು ನಾನೆಂದೋ ಇಲ್ಲಾ ಈ ನೆಲಕ್ಕಾದ ಗಾಯ ನಾನೆಂದೋ ಅನ್ನಿಸುವುದಿಲ್ಲವೇ? (1992 : 10)

ಹೀಗೆ ನಾಡಿನ ಸಾಮಾನ್ಯನೊಬ್ಬನನ್ನು, ಆತನ ನೋವುಗಳ ಸಮೇತ ಸಂಕೇತಿಸುವ ತುಕ್ರನು ತನ್ನ ಬಗ್ಗೆ ತಾನೇ ಹೀಗಂದುಕೊಂಡಿದ್ದಾನೆ - "ಅಯ್ಯೋ ಕೋಟಿ ಕೋಟಿ ಜನ ನನ್ನಂಥವರಿದ್ದಾರೆ ಸ್ವಾಮಿ, ಅವರಲ್ಲಿ ಯಾರೋ ಒಬ್ಬ ಅಥವಾ ಎಲ್ಲರೂ ಅಂತ ತಿಳಿದುಕೊಳ್ಳಿ" ಇಂತಹ ತುಕ್ರನಿಗೆ ಪಟೇಲರು ಹೂಳುವ ಕಾಲಕೋಶದಲ್ಲಿ ಜಾಗವಿಲ್ಲ. ಹೆಚ್ಚೆಂದರೆ ಬೇರೆಯವರು ಹೂಳುವ ಕಾಲಕೋಶಕ್ಕೆ ಆತ ಸಹಕಾರಿಯಾಗಬಲ್ಲ ಅಷ್ಟೇ. 'ಒದೆಯೋ ಕಾಲು ಮತ್ತು ನೆಲದ ಧೂಳು' ಬಿಟ್ಟರೆ ಬೇರೇನೂ ಆತನಿಗೆ ತಿಳಿಯದು. ಇಂತಹ ತುಕ್ರ, ಪಟೇಲರೇ ಸಾರುವ ಪರಂಪರೆಯಲ್ಲಿ ಒಂದು ಸ್ಥಾನ ಗಿಟ್ಟಿಸಿಕೊಳ್ಳುತ್ತಾನಾದರೂ ವರ್ತಮಾನದಲ್ಲಿ ಕಜ್ಜಿಹುರುಕನಾಗಿ ನವೆಯುತ್ತಾನೆ. ಕೊಳೆತು ನಾರುವ ಹಕ್ಕಿಗಾಗಿ ಮಾತ್ರ ಆತ ಬೇಡಿಕೆ ಮುಂದಿಡಬಲ್ಲ. ಇಷ್ಟಿದ್ದರೂ ತುಕ್ರನಲ್ಲಿ ಈ ನಾಡು ಯಾವ ಕಾಲದಿಂದಲೋ ಉಳಿಸಿಕೊಂಡು ಬಂದ ಒಂದು ಬಗೆಯ ಸತ್ತ್ವವಿದೆ. ಈ ಸತ್ತ್ವದಿಂದಲೇ ಆತ ಪಟೇಲನನ್ನೂ ಇದಿರಿಸುತ್ತಾನೆ. ಶಾನುಭೋಗನನ್ನೂ ದಿಕ್ಕೆಡಿಸುತ್ತಾನೆ. ಮತ್ತೆ ಮತ್ತೆ ಪೆಟ್ಟು ತಿಂದರೂ ಆತ ಪುಟಿದೇಳುವುದು ಈ ಸತ್ತ್ವದಿಂದಲೇ. ಒಮ್ಮೆಯಂತೂ ಆತ ಗಟ್ಟಿ ಮನಸು ಮಾಡಿ ಪಟೇಲ ಗೌಡ, ಶಾನುಭೋಗರ ಕೆಲಸ ಮಾಡದೇ ಉಳಿದುಬಿಡುತ್ತಾನೆ. ಆದರೆ ವ್ಯವಸ್ಥೆ ಅದರಿಂದ ದಿಕ್ಕೆಡುವುದಿಲ್ಲ. ಅದು ತುಕ್ರನ ಬದಲಿಗೆ ತುಕ್ರನ ಹಾಗೇ ಇರುವ ಸಿಂಗ್ರನನ್ನು ಆಯ್ದುಕೊಳ್ಳುತ್ತದೆ, ತನ್ನನ್ನು ಕಾಪಾಡಿಕೊಳ್ಳುತ್ತದೆ. ಈಗ ತುಕ್ರನಿಗೆ ಗೋರಿಯೊಂದೇ ಉಳಿಯುತ್ತದೆ. ಇನ್ನೇನು ಅದರಲ್ಲಿ ಸತ್ತು ಬಿಡಬೇಕೆಂದಾಗ ಆತನಿಗೆ ಭವಿಷ್ಯದಲ್ಲಿ ಭಾರೀ ನಂಬಿಕೆ ಬಂದು, ಗೋರಿಯಿಂದ ಹೊರಬಂದು ನಗರದತ್ತ ಹೊರಡುತ್ತಾನೆ.

ನಾಟಕದ ಉತ್ತರಾರ್ಧವು ವಸಾಹತೀಕರಣಕ್ಕೆ ಒಳಪಟ್ಟ ತುಕ್ರನನ್ನು ಮುಂದಿಡುತ್ತದೆ. ಫಳಫಳ ಹೊಳೆಯುವ ಪ್ಯಾಂಟು, ಶರ್ಟು, ಹ್ಯಾಟು, ರಾಣಿ ಸೋಪು, ಪೌಡರ್‌ಗಳು ಒಮ್ಮೆಗೆ ತುಕ್ರನನ್ನು ಅವನ ಹಿಂದಿನ ಸ್ಥಿತಿಯಿಂದ ಬೇರ್ಪಡಿಸುತ್ತದೆ. ಆದರೆ ನಾಟಕ ಬೆಳೆಯುತ್ತಲೇ ಈ ಬೇರ್ಪಟ್ಟ ಸ್ಥಿತಿ. ಹಿಂದಿಗಿಂತಲೂ ಅಪಾಯಕಾರಿಯಾಗಿರುವುದು ಮನದಟ್ಟಾಗುತ್ತಾ ಹೋಗುತ್ತದೆ. ಈ ಅರ್ಥದಲ್ಲಿ ತುಕ್ರ ನೀಡುವ ಗಲ್ಲಿನ ವಿವರಣೆಯು ಸಶಕ್ತವಾದ ಪ್ರತಿಮೆಯಾಗಿದೆ. ಕೇವಲ ಕನಸಲ್ಲಿ ಮಾತ್ರ "ಬೇರೆ ಸೀಮೆಯಿಂದ ಹಾರಿ ಬಂದ ಕೆಂಪುಮೂತಿಯ ಕೆಂಚಗಣ್ಣಿನ ಕಲೋನಿಯಲ್ ಹಕ್ಕಿ"ಯನ್ನು ಸೋಲಿಸುವ ಆತ ಅದೇ ಕನಸಲ್ಲಿ ಪಟೇಲನನ್ನೂ ಬಂಧಿಸುತ್ತಾನೆ. ವಾಸ್ತವದಲ್ಲಿ ಆಕಾಶದ ನಕ್ಷತ್ರವಾಗಿದ್ದರೂ ಕನಸಲ್ಲಿ 'ತಾರಾ' ಆಗಿರುವ ಹೆಣ್ಣನ್ನು ಆತ ಪ್ರೇಮಿಸುತ್ತಾನೆ. ಆದರೆ ಕನಸು ಬಂದಿದು ವಾಸ್ತವಕ್ಕೆ ಬಂದಾಗ ತುಕ್ರನಿಗೆ ಇದಿರಾದದ್ದು ಸೊನ್ನೆ ಬರೆದು ಗಲ್ಲಿಗೆ ಕೊರಳೊಡ್ಡುವ ಕೆಲಸ. ಅದಕ್ಕೆ ಆತ ಸಿದ್ಧನಾಗುವಲ್ಲಿಗೆ ನಾಟಕ ಮುಗಿಯುತ್ತದೆ.

ಹುಲಿಯ ನೆರಳು ನಾಟಕದಲ್ಲಿಯಂತೆ ಈ ನಾಟಕದಲ್ಲಿ ವಸಾಹತು ಪೂರ್ವದ ಸಮಾಜವನ್ನು ಉದಾರವಾಗಿ ನೋಡಲಾಗಿಲ್ಲ. ಆ ಸಮಾಜಕ್ಕೆ ಹಿಂದಿರುಗಿದರೆ ಒಳಿತಾಗಬಹುದೋ ಏನೋ ಎಂಬ ಆಶಾವಾದವೂ ಇಲ್ಲಿಲ್ಲ. ಅದೇನಿದ್ದರು ಕಜ್ಜಿಹುರುಕರ, ತಮಗೆ ತಾವೇ ಗೋರಿ ತೋಡಿಕೊಳ್ಳುವವರ ಲೋಕ. ಅದನ್ನು ಬಿಟ್ಟು ಈಚೆ ಬರುವುದೆಂದರೆ ಬಾಣಲೆಯಿಂದ ಬೆಂಕಿಗೆ ಬಿದ್ದಂತೆ. ಇಲ್ಲಿಯೂ ಸುಖವಿಲ್ಲ; ಕನಸುಗಳಿಲ್ಲ "ಭಯ ಮತ್ತು ಅಪಾಯವಿಲ್ಲದೆ ನೆಮ್ಮದಿಯಿಂದ ಭುಜದ ಮೇಲೆ ತಲೆ

ಇಟ್ಟುಕೊಂಡು ನಡೆಯೋದು'' ಎರಡೂ ಕಡೆ ಸಾಧ್ಯವಿಲ್ಲ. ಇಂಥ ಭೀಕರ ಸ್ಥಿತಿಯಲ್ಲಿ ತುಕ್ರನ ಸಾವು ಅನಿವಾರ್ಯವಾಗುತ್ತದೆ. ಇದನ್ನು ಸೈದ್ಧಾಂತಿಕವಾಗಿ ನೋಡಿದಾಗ 'ತುಕ್ರನ ಕನಸು' ನಾಟಕದಲ್ಲಿನ ವೈಚಾರಿಕತೆ ಹೆಚ್ಚು ಪ್ರೌಢವೂ ತಾರ್ಕಿಕವೂ ಆಗಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಭಾರತದ ಇತಿಹಾಸ ಮತ್ತು ವರ್ತಮಾನದ ಬಗೆಗೆ ಅರಿವಿದ್ದವರೆಲ್ಲ ಹೇಳಬಹುದಾದ ಮಾತುಗಳಿವು.

ಇಷ್ಟಿದ್ದರೂ ಈ ಎರಡೂ ನಾಟಕಗಳನ್ನು ತೌಲನಿಕವಾಗಿ ಗಮನಿಸಿದಾಗ 'ಹುಲಿಯ ನೆರಳೇ' ಹೆಚ್ಚು ಇಷ್ಟವಾಗುವುದಕ್ಕೆ ಕಾರಣವೇನು ಎಂಬ ಪ್ರಶ್ನೆಯನ್ನು ನಮಗೆ ನಾವೇ ಕೇಳಿಕೊಂಡರೆ ಕಟುಸತ್ಯವೊಂದಕ್ಕೆ ನಾವು ಮುಖಾಮುಖಿಯಾಗಲೇಬೇಕಾಗುತ್ತದೆ. ಬಹುಶಃ ನಾವೇ ವಸಾಹತೀಕರಣಕ್ಕೊಳಪಟ್ಟ ಸ್ಥಿತಿಯೊಂದನ್ನು ಅದು ಸಂಕೇತಿಸಬಹುದು. ಕಂಬಾರರ ಜಾನಪದ ಕಲ್ಪನೆಯು ಒರಿಯುಂಟಲಿಷ್ಟರ ಪೌರ್ವಾತ್ಯ ಕಲ್ಪನೆಯಿಂದ ನಿಷ್ಪನ್ನವಾದುದೇ ಹೌದಾದರೆ ನಮಗೆ ಇದರಿಂದ ಬಿಡುಗಡೆ ಇರುವಂತೆ ತೋರುವುದಿಲ್ಲ. ರಾಮಗೊಂಡ ಹಿಂದಿರುಗಬಯಸುವ ಲೋಕಕ್ಕೆ ಹೋದರೆ ಅಲ್ಲಿ ಸದಾ ಒದೆ ತಿನ್ನುವ ಕಜ್ಜಿಹುರುಕ ತುಕ್ರರಿರುತ್ತಾರೆ. ಗೌಡನ ಸ್ಥಾನವನ್ನು ಆಕ್ರಮಿಸಿಕೊಂಡ ರಾಕ್ಷಸನನ್ನು ಒಪ್ಪಿಕೊಂಡರೆ ಆಗ ಅನೇಕ ತುಕ್ರರುಗಳೆಲ್ಲ ಸೊನ್ನೆ ಬರೆಯುತ್ತ ಗಲ್ಲುಕಂಬಕ್ಕೆ ಕೊರಳೊಡ್ಡಬೇಕಾಗುತ್ತದೆ. ನೆರಳಿಲ್ಲದ ಸತ್ಯದ ಸಾಕ್ಷಾತ್ಕಾರ ಸಾಧ್ಯವಿಲ್ಲದಿರುವಾಗ ಬಿಡುಗಡೆಯ ಹಾದಿ ತೋರುವವರು ಯಾರು?

ಬ್ರಿಟಿಷರು ಬಿಟ್ಟು ಹೋದ ಸೋಪಿನ ತುಂಡನ್ನು ಮತ್ತೆ ಮತ್ತೆ
ತಿಕ್ಕಿ ನಿರ್ನಾಮ ಮಾಡುವವರೋ?
ತಿಕ್ಕಿದ ಕೈಯನ್ನು ಮೂಸಿ ನೋಡುತ್ತ ಅದರ ಪರಿಮಳಕ್ಕೆ
ಮೈಮರೆಯುವವರೋ?
ಬ್ರಿಟಿಷ್ ಚೆಲುವೆ ಕೈ ಹಿಡಿದು ಮದುವೆಯಾಗಲು ಕೇಳಿದಳೆಂದು ಹೇಳುತ್ತ ದೊಡ್ಡಸ್ತಿಕೆ ಮೆರೆಯುವವರೋ?

ಅಥವಾ

ಇದಾವುದರ ಪರಿವೆಯೂ ಇಲ್ಲದೆ ತನ್ನಷ್ಟಕ್ಕೆ ತಾನು
ನಲಿಯುತ್ತ ಬಾಸೆಲ್ ಶಾಸ್ತ್ರಿಗಳಿಗೆ ಭೂತದ ಪರಿಭಾಷೆಯನ್ನು ವಿವರಿಸಿದ ಅನೇಕ ಅಜಲಾಯರೋ ಯಾರು ಉತ್ತರಿಸಬೇಕು.



# ಕುಂತಿಯ ಗೆಲವು

ಎಸ್.ಜಿ. ಸಿದ್ಧರಾಮಯ್ಯ

ಹುಟ್ಟಿದ ಮನೆಯ ಮೆಟ್ಟಿಲು ದಾಟಿದ
ದತ್ತಕ ಬಾಳಿನ ದಾರುಣ ನೋವಿನ
ಕಳ್ಳು ಬಳ್ಳಿಯ ಸ್ವಾದರೆ ಸಂಪದ
ಹೇಳಿ ಕಳೆಯಾದ ಬಾಳಿನ ಕತ್ತಲೆ

ರಾಜ ತೇಜದ ಬೀಜ ಮೂಲವು
ತಂಗಿ ಗೊತ್ತಿತ್ತೇ ನನಗೆ ಗೊತ್ತಿತ್ತೇ.

ಅಮ್ಮನ ಮಡಿಲಿಗೆ ಎರವಾದದ್ದು
ಅಪ್ಪನ ಪ್ರೀತಿಗೆ ಹೊರೆಯಾದದ್ದು
ಇಟ್ಟ ಹೆಸರಿಗೂ ಮರೆಯಾದದ್ದು
ದತ್ತಕ ಹುಣ್ಣಿನ ತವರಾದದ್ದು

ಮಕ್ಕಳಿಲ್ಲದ ಒಡಲಿನ ಮಡಿಲಿಗೆ
ದುಃಖ ನೀಗಿದ ಸಕ್ಕರೆಯಚ್ಚು
ನಿಂತರು ಮೆಚ್ಚು ಕುಂತರು ಮೆಚ್ಚು
ಸಂತೆ ಸುದ್ದಿಗೋ ಸಂತಾನ ಹೆಚ್ಚು

ಮರೆಯದ ಮನೆಯ ಮರೆಸಿದ ದಿನವು
ಹರೆಯದ ನಗುವನು ಹುಚ್ಚಾಗಿಸಿತು
ಮುಂಗೋಪಿ ಮುನಿಯ ಕಾಯದ ಬೆಂಕಿಗೆ
ಮಾಯದ ಪರುವತ ಮಿನಮಿನ ಮಿರುಗು

ತಪಸಿಯ ತಾಪ ಭೋಜನ ತಲ್ಲಣ
ಮಗಳಾ ಶೀಲವೆ ಸಿಟ್ಟಿಗೆ ತರ್ಪಣ
ಗುರುವಿನ ಶೂಲ ರಾಜನ ಮೂಲ
ಮನೆಯ ಮಗಳಿಗೆ ವಂಚನೆ ಜಾಲ

ತಂಗಿ ಗೊತ್ತಿತ್ತೇ ನನಗೆ ಗೊತ್ತಿತ್ತೇ
ರಾಜ ತೇಜದ ಬೀಜ ಮೂಲವು
ಅಂಬಿಕೆ ನೋವಿನ ಕುರುಡಿನ ಹುರುಡು
ಕಳ್ಳು ಬಳ್ಳಿಯ ಕಾರಾಸ್ಥಾನವು



ಹೆತ್ತ ಒಡಲಿಗೆ ಮಡಿಲೇ ಬರಿದೊ
ಬರಿದಾ ಎದೆಗೆ ಬಣಬಣ ನೋವು
ಹೊಕ್ಕಳ ಬಳ್ಳಿಯ ಸೂತಕ ಸಂಕಟ
ಹೇಳಿ ಕಳೆಯದ ಮಾಯದ ಬಾವೊ

ನಾಯಿ ಮೂಸಿದ ಮಡಕೆಯ ಗತಿಯಲಿ
ತೊನ್ನು ತೇಜದ ಬೀಜಕೆ ಬಾಗಿನ
ಹೊನ್ನ ಶೂಲಕೆ ಕೊರಳೊಡ್ಡಿದ್ದು
ಉಪ್ಪಿನ ಋಣಕೆ ಒಡಲೊಡ್ಡಿದ್ದು

ತಂಗಿ ಗೊತ್ತಿತ್ತೇ ನನಗೆ ಗೊತ್ತಿತ್ತು
ರಾಜ ತೇಜದ ಬೀಜ ಮೂಲವು
ಬರಿದಾ ಎದೆಗೆ ಬಣಬಣ ನೋವು
ಮನವನು ಕೊಲ್ಲುವ ಮೈಯನು ತಿನ್ನುವ




ಮಾತು ಮಾತಿನ ಸೂತಕದಲ್ಲಿ
ಸಂತಾನ ಸಂಪದ ಗೆಲ್ಲುವುದು
ಹೆಣ್ಣಿನ ಬಾಳಿನ ಕಣ್ಣೀರಿನಲ್ಲಿ
ಹುರುಡಿನ ಕುರುಡನೆ ಮೆರೆಯುವುದು

ಅಂಬಿಕೆಯತ್ತೆಯ ಶಿವ ಗೋಳಿನಲಿ
ಸಾವು ನಾಚಿದೆ ಸುಳಿಯದೆ ಸನಿಹಕೆ
ಒಪ್ಪದ ತಪ್ಪಿಗೆ ಹಾದರದಪ್ಪಿಗೆ
ಮನಸಿನ ವಂಚನೆ ಮಾತಿನ ಸೂತಕ

ನನಸು ಕನಸನು ಕೂಗಿ ಕರೆಯಿತು
ಧರ್ಮನ ದಾರಿಯ ನಾ ತುಳಿದೆ
ಮಿಂಚುಗಣ್ಣಲಿ ಸಂಚು ಹೊರಳಿತು
ಧರ್ಮ ತೇಜವನೆ ನಾ ಪಡೆದೆ.

ಪ್ರಾಣದೇವನ ಭೀಮ ಪ್ರೀತಿಯಲಿ
ಪರಮ ಭಾಗ್ಯ ನಾ ಬಲ ಪಡೆದೆ
ಹೆಣ್ಣಿನ ಕಣ್ಣಲಿ ಮಿಂಚನು ತುಳಿಕಿಸೊ
ಸಂಚುಗಾರನಾ ಸುರ ತೇಜ

ತೊನ್ನಿನ ಹುರುಡಿಗೆ ಎರಡನೆ ಕುರುಡೆ
ತಂಗೀ ಗೊತ್ತಿತ್ತೇ ನನಗೆ ಗೊತ್ತಿತ್ತೆ
ಹೊನ್ನಿನ ಬಾಳಿಗೆ ಮನ್ನಣೆ ಬರಡೇ
ನಿನ್ನೆಯ ಉತ್ತರ ಇಂದಿಗೆ ನಾಳೆಗೆ.

# ಸಾಹಿತಿ ಮತ್ತು ಸಾಮಾಜಿಕ ಹೊಣೆಗಾರಿಕೆ

*ವ್ಯಾಸರಾಯ ಬಲ್ಲಾಳ*



ಬದುಕನ್ನು ಅದರ ಸಮಗ್ರ ಸ್ವರೂಪದಲ್ಲಿ ಗುರುತಿಸಿ, ಸಮಷ್ಟಿಯ ನಡೆವಳಿಕೆಯನ್ನು ನಿಯಂತ್ರಿಸಬೇಕಾದ ಮಾನವೀಯವೆನಿಸುವ ಮೌಲ್ಯ ಪ್ರಜ್ಞೆಯ ಆಧಾರದಿಂದ ಅದನ್ನು ಗ್ರಹಿಸಿ, ತನ್ನ ಸೃಜನಶೀಲ ಕ್ರಿಯೆಗೆ ಚಾಲನೆ ಕೊಡುವ ಸಾಹಿತಿಯ ಸಾಮಾಜಿಕ ಹೊಣೆಗಾರಿಕೆ ಯಾವ ರೀತಿಯದಿರಬೇಕು ಎಂಬ ವಿಚಾರ ದೀರ್ಘ ಕಾಲ ಚರ್ಚೆಗೊಳಗಾಗಿದೆ. ಈ ಹೊಣೆಗಾರಿಕೆ ಆತನ ಅಥವಾ ಆಕೆಯ ಸೃಜನಶೀಲ ಅಭಿವ್ಯಕ್ತಿಯಲ್ಲಷ್ಟೆ ಮುಗಿಯಬೇಕೇ ಅಥವಾ ಹೆಚ್ಚಿನ ಕ್ರಿಯಾಶೀಲತೆಯ ಸಾಮಾಜಿಕ ಹೊಣೆಗಾರಿಕೆಯನ್ನೂ ಅದು ಅಪೇಕ್ಷಿಸುವುದೇ ಎಂಬ ವಿಚಾರಗಳನ್ನೂ ಲೇಖಕನ ಸಾಮಾಜಿಕ ಹೊಣೆಗಾರಿಕೆಯ ಸಂದರ್ಭದಲ್ಲಿ ವಿವೇಚಿಸದಿರಲಾಗುವುದಿಲ್ಲ.

ಎಲ್ಲ ಲೇಖಕರೂ ಸ್ವಾಭಾವಿಕವಾಗಿಯೇ ಬದ್ಧರಾಗಿರುವುದು ಬದುಕನ್ನು ಗ್ರಹಿಸುವ ಅವರ ಸಾಕ್ಷಿ ಪ್ರಜ್ಞೆಗೆ. ಇದು ಸತ್ಯಾನ್ವೇಷಣೆಯ ಹಾಗೂ ಜೀವನ ಮೌಲ್ಯಗಳ ತಿಳಿವಳಿಕೆ ತಂದುಕೊಳ್ಳುವ ನಿರ್ಲಿಪ್ತ ಸಾಕ್ಷಿ ಪ್ರಜ್ಞೆ. ಸಾಹಿತಿಯಾದವನು ಎಲ್ಲ ಕಾಲಕ್ಕೂ ಸ್ಪಂದಿಸುವುದು ವರ್ತಮಾನದ ಸಾಮಾಜಿಕ ಪರಿಸರಕ್ಕಾದರೂ, ಆತ ಭೂತವನ್ನು ಕಡೆಗಣಿಸುವಂತಿಲ್ಲ; ಭವಿಷ್ಯದ ಕಾಣ್ಕೆ ತಂದುಕೊಳ್ಳದೆ ಇರುವಂತಿಲ್ಲ. ಸಾರ್ವತ್ರಿಕವಾಗಿ ಗ್ರಾಹ್ಯವೆನಿಸಬಹುದಾದ ಜೀವನ ಮೌಲ್ಯಗಳನ್ನು ಅರಸುತ್ತಲೇ ತನ್ನ ಸೃಜನಶೀಲ ಅಭಿವ್ಯಕ್ತಿಯನ್ನು ಕಾದುಕೊಳ್ಳಬೇಕಾದ ಲೇಖಕನಿಗೆ ಅದಕ್ಕಿಂತ ಹೆಚ್ಚಿನ ಸಾಮಾಜಿಕ ಹೊಣೆಗಾರಿಕೆ ಏನಿದೆಯೆಂಬ ಪ್ರಶ್ನೆಯೂ ಚರ್ಚೆಗೊಳಗಾಗಿದೆ.

ಈ ಮೌಲ್ಯಾನ್ವೇಷಣೆಯ ಹಿಂದಿರುವ ಕಾಳಜಿ ನೈತಿಕತೆಯದು. ಸಮಷ್ಟಿಯ ಹಿತವನ್ನು ಎಲ್ಲ ಕಾಲಕ್ಕೂ ಪೋಷಿಸಿಕೊಂಡು ಬರಬಹುದೆಂದು ತಿಳಿಯಲಾಗುವ ಮಾನವೀಯವೆನಿಸುವ ನೈತಿಕತೆಯದು. ಎಲ್ಲ ಮಾನವೀಯವೆನಿಸುವ ಕಾಳಜಿಗೂ ಸ್ವಾರ್ಥವನ್ನು ಪೋಷಿಸುವ ಅಸಮತೆಯನ್ನು, ಅನ್ಯಾಯವನ್ನು, ಶೋಷಣೆಯನ್ನು ವಿರೋಧಿಸುತ್ತವೆ. ಇವೆಲ್ಲ ವ್ಯಷ್ಟಿ ಸಮಷ್ಟಿಗಳ ಸಂಬಂಧದಲ್ಲಿ ಬೆರೆತಿರುವ ಒಂದು ರೀತಿಯ ಕ್ರೌರ್ಯವನ್ನು ಸೂಚಿಸುವುದರಿಂದಲೂ ಇಂತಹ ಕ್ರೌರ್ಯವನ್ನು ವಿರೋಧಿಸದೆ ಯಾವ ಮೌಲ್ಯ ಪ್ರಜ್ಞೆಯೂ ಪ್ರಾಮಾಣಿಕವಾದುದೆನಿಸುವುದಿಲ್ಲ. ಈ ವಿರೋಧದ ಸಾಹಿತ್ಯಕ ಅಭಿವ್ಯಕ್ತಿ ಕಲಾತ್ಮಕವಾಗಿ ಪ್ರಕಟವಾಗಿದೆಯೇ, ಅದಕ್ಕೆ ಸಮಾಜ ಸ್ಪಂದಿಸುವ ಬಗೆ ಹೇಗೆ ಎನ್ನುವ ವಿಚಾರಗಳೆಲ್ಲ ವಿಮರ್ಶೆಯ ಕ್ಷೇತ್ರಕ್ಕೆ ಸಂಬಂಧಪಟ್ಟಂಥವು. ಅದು ಇಲ್ಲಿ ಮುಖ್ಯವಲ್ಲ. ಸಮಷ್ಟಿಯ ಹಿತ ರಕ್ಷಣೆಗೆ, ಮಾನವೀಯವೆನಿಸುವ ಮೌಲ್ಯಗಳ ಹೊಣೆಗಾರಿಕೆ ಬರೇ ಸಾಹಿತ್ಯಕ ಅಭಿವ್ಯಕ್ತಿಯಲ್ಲಿ

ಮುಗಿಯುವುದೇ ಅಥವಾ ಅದಕ್ಕಿಂತ ಮುಂದುವರಿದ ಕ್ರಿಯಾಶೀಲತೆಯನ್ನು ಅಪೇಕ್ಷಿಸುತ್ತದೆಯೇ ಎನ್ನುವುದು ಯೋಚಿಸಬೇಕಾದ ವಿಚಾರ.

ಕಳೆದ ಶತಮಾನದ ವೈಚಾರಿಕತೆಯನ್ನು ರೂಪಿಸಲು ಕಾರಣರಾದ ಮೂವರು ಮಹಾನ್ ವ್ಯಕ್ತಿಗಳ ನೆನಪು ತಂದುಕೊಂಡು ನಾವು ಮುಂದುವರಿಯಬೇಕು. ಡಾರ್ವಿನನ ವಿಕಾಸ ವಾದ, ಕಾರ್ಲ್ ಮಾರ್ಕ್ಸ್ ಅವರ ಚಾರಿತ್ರಿಕ ಭೌತ ವಾದ, ಸಿಗ್ಮಂಡ್ ಫ್ರಾಯಡ್ ಅವರ ಮನೋವಿಶ್ಲೇಷಣೆಯ ಸಿದ್ಧಾಂತಗಳು ಇವೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಈ ವಿಜ್ಞಾನ ಯುಗದ ಚಿಂತನೆಯ ರೀತಿಯನ್ನು ಪ್ರಭಾವಿಸಿವೆ. ಇದರಿಂದಾಗಿಯೇ ಇಂದು ಸಾಹಿತಿ ಕಾಲ ದೇಶಗಳ ಪರಿಮಿತಿಯನ್ನು ದಾಟಿದ ಒಂದು ಚಿಂತನ ಘಟಕವಾಗಿಯೇ ಎಲ್ಲ ಲೇಖಕರ ಜತೆಗೆ ಒಂದು ರೀತಿಯ ವೈಚಾರಿಕ ಐಕ್ಯವನ್ನು ಸಾಧಿಸಿಕೊಂಡಿದ್ದಾನೆ. ಆತನ ಅಭಿವ್ಯಕ್ತಿಯ ವಿನ್ಯಾಸ ಬೇರೆ ಬೇರೆ ರೀತಿಯದಿರಬಹುದು. ಆದರೆ ವೈಚಾರಿಕತೆಯ ಸಾಮಾನ್ಯ ಸ್ವರೂಪ ಒಂದೇ ರೀತಿಯದು.

ವ್ಯಷ್ಟಿ ಸಮಷ್ಟಿಗಳ ಸಂಬಂಧದಲ್ಲಿ ಮಾನವೀಯವೆನಿಸುವ ಮೌಲ್ಯಗಳನ್ನು ಅರಸುವ ಸಾಹಿತಿ ತನ್ನ ಪ್ರಾಮಾಣಿಕವಾದ ಸಾಕ್ಷಿ ಪ್ರಜ್ಞೆ ಪರಿಸರದ ವಿರೋಧವನ್ನು ಕಟ್ಟಿಕೊಳ್ಳಬೇಕಾಗುವುದು ಎಂಬುದನ್ನು ಮರೆಯುವಂತಿಲ್ಲ. ಈ ವಿರೋಧ ವೈಯಕ್ತಿಕವಾಗಿ ಬರಬಹುದು-ರಶ್ದಿಯವರ ಇತ್ತೀಚೆಗಿನ ಕಾದಂಬರಿಗೆ ಬಂದಂತೆ, ಸಾಮಾಜಿಕ ಸ್ವರೂಪದ್ದಿರಬಹುದು, ಅವರದೇ ಇನ್ನೊಂದು ಕಾದಂಬರಿಗೆ ದೊರಕಿದ ಮತೀಯ ಅಸಹನೆಯಂತೆ, ಅಥವಾ ಯಾವುದೇ ಸ್ಥಾಪಿತ ಹಿತದ ಸ್ವಾರ್ಥಕ್ಕೆ ಅಡ್ಡಿ ತರಬಹುದೆಂಬ ಸಾಂಸ್ಥಿಕ ಸ್ವರೂಪದ್ದಿರಬಹುದು. ನಮ್ಮಲ್ಲೇ ಕೆಲವು ಗ್ರಂಥಗಳಿಗೆ ದೊರಕುತ್ತಿರುವ ಅಸಹನೆಯ ಪ್ರತಿಕ್ರಿಯೆಯಂತೆ ಇವೆಲ್ಲವನ್ನು ಇದಿರಿಸಿಯೂ ತನ್ನ ವೈಚಾರಿಕ ಹಾಗೂ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಾದುಕೊಳ್ಳುವ ಮಹತ್ವದ ಹೊಣೆಗಾರಿಕೆ ಸಾಹಿತಿಯದು. ಈ ಕಾರಣದಿಂದ ನಿರ್ಭೀತ ಅಭಿವ್ಯಕ್ತಿ ಸ್ವಾತಂತ್ರ್ಯ ಸಾಹಿತಿಯಾದವನ ಸಾಮಾಜಿಕ ಹೊಣೆಗಾರಿಕೆಯನ್ನು ನಿರ್ಧರಿಸುವ ಮಹತ್ವದ ಮಾನದಂಡವಾಗುತ್ತದೆ. ಇದು ಬರೇ ಸಾಹಿತಿಗಳಿಗಷ್ಟೇ ಅನ್ವಯಿಸುವ ಮಾತಲ್ಲ. ವಿಶ್ವದ ಇತಿಹಾಸದ ಚಲನೆಗೆ ಸ್ಪಂದಿಸುತ್ತ ಸಂಕೀರ್ಣವಾಗುತ್ತಿರುವ ಬದುಕನ್ನು ಅದರ ಎಲ್ಲ ಮಗ್ಗಲುಗಳಿಂದ ಗ್ರಹಿಸ ಬಯಸುವ ವಿಜ್ಞಾನಿಗಳಿಗೆ, ಸಂಶೋಧಕರಿಗೆ, ಬುದ್ಧಿಜೀವಿಗಳಿಗೆ, ಸತ್ಯ ಶೋಧನೆಯ ಕುತೂಹಲವಿರುವವರಿಗೆ ನಿರ್ಭೀತ ಅಭಿವ್ಯಕ್ತಿ ಸ್ವಾತಂತ್ರ್ಯ ನೆಚ್ಚಿಕೊಳ್ಳಲೇಬೇಕಾದ ಮೌಲ್ಯವಾಗುತ್ತದೆ.

ಈ ಶತಮಾನದ ಎರಡು ಮಹಾಯುದ್ಧಗಳ ಹಿಂದಿನ ಮೌಲ್ಯಾಧಾರಿತ ಆದರ್ಶ ಸ್ವಾತಂತ್ರ್ಯದ ರಕ್ಷಣೆ. ರಾಷ್ಟ್ರಗಳಿಗೆ ಸಂಬಂಧಿಸಿದ ಸ್ವಾತಂತ್ರ್ಯದ ರಕ್ಷಣೆ. ಒಂದು ರಾಷ್ಟ್ರವಾಗಲೀ ಅದಕ್ಕೆ ಸಂಬಂಧಿಸಿದ ರಾಷ್ಟ್ರೀಯ ಅಸ್ಮಿತೆಯಾಗಲೀ ರೂಪುಗೊಳ್ಳುವುದು ಇತಿಹಾಸದ ಸಂಭವಗಳಿಂದ. ಈ ಅಸ್ಮಿತೆಯನ್ನು ಕಾದುಕೊಳ್ಳಲು ನೆರವಾಗುವುದು ಅಲ್ಲಿನ ಜನಪದ ಜೀವನ ರೂಪಿಸಿದ ಸಂಸ್ಕಾರಗಳು, ಸಮಷ್ಟಿಯ ಹಿತವನ್ನು ಸಾಧಿಸಲು ಅಗತ್ಯವಾಗುವ ಎಲ್ಲ ನಾಗರಿಕರಿಗೂ ಅನ್ವಯವಾಗುವ ಜೀವನ ಶೈಲಿ. ಎರಡನೆಯ ಮಹಾಯುದ್ಧ ಮುರಿದಾಗ, ಸುಪ್ರಸಿದ್ಧ ಫ್ರೆಂಚ್ ಸಾಹಿತಿ ಹಾಗೂ ಅಸ್ತಿತ್ವ ವಾದ ತತ್ವಜ್ಞಾನಿ ಸಾರ್ತ್ರ ಎರಡನೆಯ ಮಹಾಯುದ್ಧ ಯೂರೋಪಿನ ಲೇಖಕರು ಕಳೆದುಕೊಂಡ ಅವಕಾಶಗಳಲ್ಲಿ ಒಂದು ಎಂದಿದ್ದರು. ಸಾಕಷ್ಟು ಸಂಖ್ಯೆಯಲ್ಲಿ ಲೇಖಕರು, ಬುದ್ಧಿಜೀವಿಗಳು, ಪತ್ರಕರ್ತರು ಸಕ್ರಿಯವಾಗಿ ಭಾಗವಹಿಸಿಯೂ ಸಾರ್ತ್ರ ಹಾಗೆ ಹೇಳಲು ಕಾರಣವೇನಿರಬಹುದು ಎಂದು ಯೋಚಿಸುವಾಗ ಸೈದ್ಧಾಂತಿಕವಾಗಿ ಎಡಪಂಥೀಯ ಒಲವಿದ್ದ ಸಾರ್ತ್ರ ಅವರಿಗೆ ಯುದ್ಧ ಕೊನೆಗೊಂಡ ರೀತಿಯಲ್ಲಿ ಸೈದ್ಧಾಂತಿಕ ವಿಜಯ ಕಂಡುಬರಲಿಲ್ಲವೇನೋ. ಅದೇನೇ ಇರಲಿ, ಕಳೆದುಕೊಂಡ ಅವಕಾಶಗಳ ಕುರಿತು ಮಾತನಾಡುವಾಗ ಸಾಹಿತಿಯ ಸಾಮಾಜಿಕ ಹೊಣೆಗಾರಿಕೆ ಆತನ ಬೌದ್ಧಿಕ ಪ್ರಾಮಾಣಿಕತೆಯನ್ನಷ್ಟೇ

ಅಲ್ಲ, ಸಂದರ್ಭ ಬಂದಾಗ ಕ್ರಿಯಾಶೀಲತೆಯನ್ನೂ ಅಪೇಕ್ಷಿಸುತ್ತದೆ, ಒಂದು ಮೌಲ್ಯ ರಕ್ಷಣೆಗೆ ಅಭಿವ್ಯಕ್ತಿ ಸ್ವಾತಂತ್ರ್ಯವಷ್ಟೇ ಸಾಲದು, ಅದಕ್ಕಾಗಿ ಅಗತ್ಯವಿರುವ ತ್ಯಾಗವನ್ನೂ ಮಾಡಬೇಕಾದ ಸಂದರ್ಭದಲ್ಲಿ ಸಾಹಿತಿ ಹಿಂದೆ ಸರಿಯಬಾರದು ಎಂಬ ಸೂಚನೆಯೂ ಧ್ವನಿಸುತ್ತದೆ.

ಭಾರತದ ಭೌಗೋಲಿಕ ಅಸ್ಮಿತೆ ಸಹಸ್ರಾರು ವರ್ಷಗಳ ಸತ್ಯ. ಆದರೆ ರಾಜಕೀಯ ಅಸ್ಮಿತೆ ಬ್ರಿಟಿಷರ ಆಡಳಿತೆಯ ನಂತರ ಪಾಶ್ಚಿಮಾತ್ಯ ಚಿಂತನೆಯಿಂದ, ಮುಖ್ಯವಾಗಿ ಸ್ವಾತಂತ್ರ್ಯದ ಕುರಿತ ಪರಿಕಲ್ಪನೆಗಳಿಂದ ರೂಪಿತವಾದುದು? ನಮ್ಮ ಸಂಸ್ಕೃತಿ, ನಾಗರಿಕತೆಗಳ ಹಳೆಯ ಇತಿಹಾಸದ ಕುರಿತು ನಾವು ಎಷ್ಟೇ ಹೇಳಿಕೊಂಡರೂ, ಭಾರತಕ್ಕೆ ವಿಶಿಷ್ಟವೆನಿಸುವ, ಇಂದಿನ ಆಧುನಿಕತೆಯ ಸವಾಲುಗಳನ್ನೂ ಸ್ವೀಕರಿಸಬಲ್ಲ, ನಮ್ಮ ಜಾನಪದ ಜೀವನದ ಸಂಸ್ಕಾರಗಳಿಂದ ಪ್ರಭಾವಿತವಾದ ಒಂದು ರಾಷ್ಟ್ರೀಯವೆನಿಸುವ ಸಾಂಸ್ಕೃತಿಕ ಅಸ್ಮಿತೆಯನ್ನು ತಂದುಕೊಳ್ಳಲು ನಾವು ಇನ್ನೂ ಸಮರ್ಥರಾಗಿಲ್ಲ. ಇದಕ್ಕೆ ಕಾರಣಗಳೂ ಇವೆ. ಒಂದು ಸಾಹಿತ್ಯ ಕೃತಿಯನ್ನಾಗಲೀ ಕಲಾ ಕೃತಿಯನ್ನಾಗಲಿ ಅದರ ಯೋಗ್ಯತೆಯನ್ನು ಅಳೆಯುವ ದೃಷ್ಟಿಯಿಂದ ನಾವು ನೋಡುವುದು ಮೂರು ಗುಣಗಳಿಂದ : ಮೊದಲನೆಯದು ಅದರ ಜಾನಪದ ಸಂಸ್ಕಾರ (National Ethos) ಪ್ರಕಟವಾಗುವ ರೀತಿ, ಎರಡನೆಯದು ಸಾರ್ವತ್ರಿಕವಾಗಿ ಅನ್ವಯವಾಗಬಹುದಾದ ಅದರ ಉಲ್ಲಾಸದ ಅಭಿವ್ಯಕ್ತಿ ಹಾಗೂ ಮೂರನೆಯದು ಕೃತಿಕಾರನಿಗೇ ವಿಶಿಷ್ಟವೆನಿಸುವ ಅಭಿವ್ಯಕ್ತಿಯ ಶೈಲಿ. ಕಳೆದ ಐವತ್ತು ವರ್ಷಗಳಿಂದ ಒಂದು ರಾಷ್ಟ್ರೀಯವೆನಿಸುವ ಅಸ್ಮಿತೆಯನ್ನು ರೂಪಿಸಲು ಹೆಣಗುತ್ತಿರುವ ನಾವು ಬೇರೆ ಬೇರೆ ಭಾಷೆಗಳ, ಬೇರೆ ಬೇರೆ ಧರ್ಮಗಳ ಹಾಗೂ ಅವು ರೂಪಿಸಿರುವ ಸಂಸ್ಕಾರಗಳನ್ನು ನಮ್ಮ ಸಮಗ್ರತೆಯ ಪರಿಕಲ್ಪನೆಗಳಿಗೆ ಹೊಂದಿಸುವ ಬಗೆಗೆ ಚಿಂತಿಸುತ್ತಲೇ ಇದ್ದೇವೆ. ಯಾವುದೇ ವ್ಯವಸ್ಥೆ ರೂಪುಗೊಳ್ಳುವುದು ಒಂದು ಉದ್ದೇಶಿತ ಸ್ವಾರ್ಥದ ರಕ್ಷಣೆಗಾಗಿ. ಭಾರತದಲ್ಲಂತೂ ವರ್ಣಾಶ್ರಮ ಪದ್ಧತಿಯಿಂದ ರೂಪುಗೊಂಡ ವರ್ಣ ವ್ಯವಸ್ಥೆಯ ಅನಿಷ್ಟ ಪರಿಣಾಮಗಳನ್ನೂ ಇದಿರಿಸಬೇಕಾಗಿರುವಾಗ, ಸಮನ್ವಯ, ಸಮಗ್ರತೆಗಳ ದೃಷ್ಟಿಕೋನವನ್ನು ತಂದುಕೊಳ್ಳ ಬಯಸುವ ಸಾಹಿತಿ ಭವಿಷ್ಯದ ಕಾಣ್ಕೆ ತಂದುಕೊಳ್ಳುವುದೇ ಕಷ್ಟವೆಂದು ತಿಳಿಯುವ ಸಂದರ್ಭಗಳೂ ಇವೆ. ಜಾತೀಯತೆ ಭಾರತಕ್ಕೇ ವಿಶಿಷ್ಟವಾದ ಸಮಸ್ಯೆಯೇನಲ್ಲ. ಆದರೆ ಅದರ ವಿನ್ಯಾಸಗಳು ಮಾತ್ರ ನಮ್ಮ ಸಾಮಾಜಿಕ ಜೀವನದ ವಿಘಟಿತ ಸ್ವರೂಪವನ್ನು ಪ್ರಕಟಿಸಿ ಇನ್ನಷ್ಟು ಸಮಸ್ಯೆಗಳನ್ನು ಹುಟ್ಟುಹಾಕುತ್ತಿವೆ. ಸಾಹಿತಿಯಾದವನು ಈ ಸಮಸ್ಯೆಗಳ ಕುರಿತು ತಲೆ ಕೆಡಿಸಿಕೊಳ್ಳಬೇಕೆಂದು ಈ ಮಾತಿನ ಅರ್ಥವಲ್ಲ. ಸಾಮಾಜಿಕ ಹೊಣೆಗಾರಿಕೆಯ ದೃಷ್ಟಿಯಿಂದ ಭಾರತದ ಸಾಹಿತಿ ತುಳಿಯಬೇಕಾದ ಹಾದಿ ತುಂಬ ಕಷ್ಟದ್ದು ಎನ್ನಲು ಮಾತ್ರ ಈ ವಿವರಣೆ. ದಾರಿದ್ರ್ಯ, ಅಸಮತೆ, ಅನ್ಯಾಯ, ಶೋಷಣೆಗಳೂ ಭಾರತಕ್ಕೇ ವಿಶಿಷ್ಟವೇನಲ್ಲ. ಆದರೆ ಇವನ್ನೆಲ್ಲ ಗಮನಿಸಬೇಕಾದ ಭಾರತದ ಸಾಹಿತಿಯ ನಿರ್ಲಿಪ್ತ ಸಾಕ್ಷಿ ಪ್ರಜ್ಞೆಯೂ ಸಮಷ್ಟಿಯ ಹಿತದ ಸಮಗ್ರತೆಯ ಚಿತ್ರ ತಂದುಕೊಳ್ಳದೆ ತನ್ನ ಸಾಮಾಜಿಕ ಹೊಣೆಗಾರಿಕೆಯನ್ನು ನಿರ್ವಹಿಸಿದಂತಾಗುವುದಿಲ್ಲ. ಯಾವುದೇ ಸಮಸ್ಯೆಯನ್ನೂ ಬಿಡಿ ಬಿಡಿಯಾಗಿ ತನ್ನ ವೈಚಾರಿಕ ಅಥವಾ ಸೈದ್ಧಾಂತಿಕ ಒಲವುಗಳಿಗೆ ಹೊಂದಿಸಿ ಮೌಲ್ಯಾನ್ವೇಷಣೆಗೆ ತೊಡಗುವ ಸಾಹಿತಿ ತನ್ನ ಸಾಮಾಜಿಕ ಹೊಣೆಗಾರಿಕೆಗೆ ಪ್ರಾಮಾಣಿಕವಾದ ನಿಷ್ಠೆಯನ್ನು ತೋರಿಸುವುದಿಲ್ಲ. ನಾವು ಸಾಕಷ್ಟು ಭಾವೈಕ್ಯದ ಕುರಿತ ಮಾತುಗಳನ್ನಾಡುತ್ತೇವೆ. ಒಬ್ಬ ಸಾಹಿತಿಗೆ ಇದು ಆದರ್ಶವಷ್ಟೇ ಅಲ್ಲ, ಆತನ ಚಿಂತನ ಕ್ರಮಕ್ಕೆ ಅಗತ್ಯವೆನಿಸುವ, ಆತನ ಸಾಮಾಜಿಕ ಹೊಣೆಗಾರಿಕೆಯನ್ನು ಸ್ಪಷ್ಟಗೊಳಿಸುವ ಸಾಧನ ಕೂಡ.

ನಾವು ಪಾಶ್ಚಿಮಾತ್ಯ ರೀತಿಯ ಚಿಂತನೆಯಿಂದಲೇ ಪ್ರಭಾವಿತರಾಗಿ ಅವರಿಗೆ ಅನ್ವಯಿಸಬಹುದಾದ ಕೆಲವು ಉಪಾಯಗಳನ್ನು ನಮ್ಮ ವ್ಯವಸ್ಥೆಗೆ ಹೊಂದಿಸಿ ಕೆಲವೊಮ್ಮೆ ಎಡವುತ್ತೇವೆ, ಆ ಮೂಲಕ ನಮ್ಮ ಸಾಮಾಜಿಕ ಹೊಣೆಗಾರಿಕೆಯನ್ನೂ ಮರೆಯುತ್ತೇವೆ ಎನ್ನಲಷ್ಟೆ ಮೇಲಿನ ಮಾತುಗಳು. ಉದಾಹಣೆಗೆ

ನಾವು ನಮ್ಮ ವರ್ಣ ವ್ಯವಸ್ಥೆಯ ಅನಿಷ್ಟಗಳನ್ನೆಲ್ಲ ಪಶ್ಚಿಮದ ವರ್ಣ ವ್ಯವಸ್ಥೆಗೆ ಹೊಂದಿಸಿ ನೋಡುತ್ತೇವೆ. ಇದು ಸರಿಯೇ ಎಂದು ಚಿಂತಿಸುವುದಿಲ್ಲ. ಪಶ್ಚಿಮ ವರ್ಣ ವ್ಯವಸ್ಥೆ ಜನಾಂಗ ಪ್ರಜ್ಞೆಯಿಂದ ಹುಟ್ಟಿ ಬಿಳಿ ಕರಿಯ ಭೇದಗಳಲ್ಲಿ ಬೆಳೆದುಬಂದ ಶೋಷಣೆಯ ಒಂದು ಮುಖ. ನಮ್ಮ ಜಾತೀಯತೆ ಭಾರತಕ್ಕೆ ವಿಶಿಷ್ಟವೆನಿಸುವ ವರ್ಣಾಶ್ರಮ ಪದ್ಧತಿಗೆ ಹೊಂದಿಕೊಂಡು ಕೆಟ್ಟ ಪರಿಣಾಮಗಳನ್ನು ಉಂಟುಮಾಡುತ್ತಿರುವುದು. ಆದರೆ ಇದರ ಸ್ಪಷ್ಟ ರೂಪವನ್ನು ಭಾರತೀಯ ಪರಿಸರದಲ್ಲಿ, ಭಾರತೀಯ ಜನ ಜೀವನ ಬದಲಾಗುತ್ತಿರುವ ರೀತಿಯಲ್ಲಿ ಹುಡುಕಬೇಕೇ ಹೊರತು ಜಾತೀಯತೆಯೊಂದೇ ಎಲ್ಲ ಶೋಷಣೆಗೂ ಮುಖ್ಯ ಕಾರಣ ಎಂದು ಹೇಳಲು ಹೊರಟರೆ ಅದು ಸಾಹಿತಿ ತನ್ನ ಸಾಮಾಜಿಕ ಹೊಣೆಗಾರಿಕೆಯಿಂದ ದೂರ ಸರಿದಂತೆ ಎಂದು ಹೇಳಬೇಕಾಗುವುದು. ಆರ್ಥಿಕ ಕಾರಣಗಳಿಂದ ಬದಲಾಗುತ್ತಿರುವ ನಮ್ಮ ಸಾಮಾಜಿಕ ಜೀವನ, ಬೆಳೆಯುತ್ತಿರುವ ಮಧ್ಯಮ ವರ್ಗ, ವಿವಿಧ ಮೂಲಗಳಿಂದ ಈ ಮಧ್ಯಮ ವರ್ಗವನ್ನು ಸೇರುತ್ತಿರುವ ಜನ ಅಪ್ರತ್ಯಕ್ಷವಾಗಿ ಕೆಲವು ರೀತಿಯ ಶೋಷಣೆಗಳನ್ನು ಅಳಿಸಲು ಹಾಗೆಯೇ ಇನ್ನು ಕೆಲವು ಭಿನ್ನರೀತಿಯ ಶೋಷಣೆಗಳನ್ನು ಉಂಟುಮಾಡಲು ಕಾರಣರಾಗುತ್ತಿದ್ದಾರೆ ಎಂಬ ಸಮಾಜ ಶಾಸ್ತ್ರೀಯ ಸತ್ಯವನ್ನು ಸಾಹಿತಿ ಮರೆತರೆ ಆತ ತನ್ನ ಸಾಮಾಜಿಕ ಹೊಣೆಗಾರಿಕೆಯಿಂದ ದೂರ ಸರಿಯುತ್ತಾನೆ. ಮಧ್ಯಮವರ್ಗ ಬೆಳೆಯುತ್ತ ಬಂದಂತೆ ವರ್ಣ ಸಂಘರ್ಷದ ಕೆಲವು ಕೆಟ್ಟ ಪರಿಣಾಮಗಳು ಅಳಿಯುತ್ತ ವರ್ಗ ಸಂಘರ್ಷದ ಇನ್ನು ಕೆಲವು ಅನಿಷ್ಟ ಪರಿಣಾಮಗಳು ಹುಟ್ಟುವುದನ್ನೂ ಸಾಹಿತಿಯಾದವನು ಗಮನಿಸದಿರಲಾಗುವುದಿಲ್ಲ. ಇದಕ್ಕಾಗಿಯೇ ಸಾಹಿತಿಯ ಸಾಮಾಜಿಕ ಹೊಣೆಗಾರಿಕೆ ನಿರ್ಲಿಪ್ತ ಸಾಕ್ಷಿ ಪ್ರಜ್ಞೆಯಿಂದ ಪ್ರೇರಿತವಾಗಿರಬೇಕು ಎನ್ನುವುದು.

ಇಲ್ಲಿ ಮುಖ್ಯವಾಗಿ ಹೇಳಬಯಸುವ ಮಾತೊಂದೇ. ಭಾರತೀಯ ಪರಿಸರದಲ್ಲಿ ಸಾಹಿತಿಯಾದವನ ಸಾಮಾಜಿಕ ಹೊಣೆಗಾರಿಕೆ ವಿಶ್ವದ ಇತರ ಭಾಗಗಳಿಗಿಂತಲೂ ಕಷ್ಟದ್ದು ಹಾಗೂ ಗಂಭೀರವಾದದ್ದು. ಭಾಷಿಕ, ಪ್ರಾದೇಶಿಕ, ಧಾರ್ಮಿಕ ಸ್ವಾರ್ಥಗಳನ್ನು ಗಮನಿಸುವಾಗ ಎಡವದೆ ಸಮಗ್ರತೆಯ ಹಾಗೂ ಸಮನ್ವಯದ ತಿಳಿವಳಿಕೆ ತಂದುಕೊಂಡು ತನ್ನ ಮೌಲ್ಯಾನ್ವೇಷಣೆಯಲ್ಲಿ ಮಾನವೀಯ ಹಾಗೂ ಸಾರ್ವತ್ರಿಕವಾಗಿ ಅನ್ವಯಿಸಬಹುದಾದ ಗುಣಗಳನ್ನು ಶೋಧಿಸುವ ಕಷ್ಟದ ಕೆಲಸವೂ ಭಾರತದ ಸಾಹಿತಿಯ ಸಾಮಾಜಿಕ ಹೊಣೆಗಾರಿಕೆಯ ವ್ಯಾಪ್ತಿಯಲ್ಲಿ ಬರುವಂಥದು.

ಸಾಹಿತ್ಯಕ ಅಭಿವ್ಯಕ್ತಿಗೆ ಸಂಬಂಧಿಸಿದಂತೆ ಸಾಹಿತಿಯ ಹೊಣೆಗಾರಿಕೆ ತನ್ನ ಪರಿಸರಕ್ಕೆ ಸ್ಪಂದಿಸುವಾಗ ನಿರ್ಭೀತ ಪ್ರಾಮಾಣಿಕತೆ, ವೈಚಾರಿಕತೆಯಿಂದ ಕೂಡಿದ, ಸಮನ್ವಯಕ್ಕೆ ಪೋಷಕವಾದ ಸಮಗ್ರತೆಯ ಸಂವೇದನೆ ಹಾಗೂ ಆತನ ಮೌಲ್ಯ ಪ್ರಜ್ಞೆಯನ್ನು ನಿರ್ದೇಶಿಸುವ ಜಾತಿ, ಪ್ರದೇಶ, ಭಾಷೆಗಳಿಗಷ್ಟೇ ಅಂಟಿಕೊಳ್ಳದ ನಿರ್ಲಿಪ್ತ ಸಾಕ್ಷಿ ಪ್ರಜ್ಞೆ ಅಗತ್ಯವೆಂದು ಹೇಳಿದ ಮೇಲೆ ಸಾಹಿತಿ ಎಷ್ಟರ ಮಟ್ಟಿಗೆ ತನ್ನ ಅಭಿವ್ಯಕ್ತಿ ಸ್ವಾತಂತ್ರ್ಯದಲ್ಲಿ ಪ್ರಕಟಿಸುವ ಮೌಲ್ಯಗಳಿಗೆ ಧಕ್ಕೆ ಬರುವಂಥ ಸಂದರ್ಭಗಳಲ್ಲಿ ಯಾವ ರೀತಿ ಕ್ರಿಯಾಶೀಲನಾಗಿ ತನ್ನ ಹೊಣೆಗಾರಿಕೆಯನ್ನು ನಿರ್ವಹಿಸಬಹುದು ಎಂಬುದರ ಕುರಿತು ಎರಡು ಮಾತುಗಳನ್ನು ಹೇಳಬಯಸುತ್ತೇನೆ. ಈ ಸಂದರ್ಭದಲ್ಲಿ ನನಗೆ ನೆನಪಾಗುವುದು ಈಗ ಇಪ್ಪತ್ತೈದು ವರ್ಷಗಳ ಹಿಂದೆ ನಡೆದ ಬಾಂಗ್ಲಾ ದೇಶದ ವಿಮೋಚನೆಯ ಸಂದರ್ಭದಲ್ಲಿ ಭಾರತ ಮಾಡಬೇಕಾಗಿ ಬಂದ ಯುದ್ಧದಲ್ಲಿ, ತನ್ನ ಇಳಿ ವಯಸ್ಸಿನಲ್ಲೂ ಈ ಮೌಲ್ಯ ರಕ್ಷಣೆಯ ಯುದ್ಧದಲ್ಲಿ ತಾನು ಕೋವಿ ಹಿಡಿದು ಯುದ್ಧಕ್ಕೆ ಧಾವಿಸಲು ಇಚ್ಛಿಸುತ್ತೇನೆ ಎಂದ ಸುಪ್ರಸಿದ್ಧ ಫ್ರೆಂಚ್ ಬರೆಹಗಾರ ಮಾಲ್‌ರಕ್ಸ್ ಅವರ ಮಾತು. ಭಾರತದ ಯಾವ ಲೇಖಕನೂ ಆ ರೀತಿ ಮಾತನಾಡಿದ ನೆನಪು ನನಗಿಲ್ಲ. ನಾವು ಹೊಸದಾಗಿ ರೂಪಿಸಬಯಸುವ ರಾಷ್ಟ್ರೀಯವೆನಿಸುವ ಅಸ್ಮಿತೆಗೂ ನಮ್ಮ ಮೌಲ್ಯ ಪ್ರಜ್ಞೆಗೂ ಇರಬೇಕಾದ ಸಂಬಂಧದ ಕುರಿತಷ್ಟೆ ನಾನು ಈ ಉದಾಹರಣೆಯನ್ನು ಹೇಳಿದ್ದು. ಆದರೆ ಇದಕ್ಕೆ ನಾವು ನಮ್ಮ ಭಾರತೀಯ ಸಾಹಿತಿಗಳನ್ನೂ ಟೀಕೆಗೊಳಪಡಿಸುವುದೂ ಅಷ್ಟಾಗಿ ಸರಿಯೆನಿಸುವುದಿಲ್ಲ. ಸಾಹಿತ್ಯ ಭಾರತದಲ್ಲಿ ಬಹಳ

ಮಟ್ಟಿಗೆ ಇನ್ನೂ ಒಂದು ಹವ್ಯಾಸವಾಗಿಯೇ ಇದೆ, ಜೀವನ ಕ್ರಮವಲ್ಲ. ವಸಾಹತುಶಾಹಿ ಚಿಂತನೆಯಿಂದ ಇನ್ನೂ ಬಿಡುಗಡೆ ಪಡೆದಿಲ್ಲವೆಂಬಂತೆ ಭಾರತೀಯ ಭಾಷಾ ಸಾಹಿತಿ ತನ್ನ ಪರಿಮಿತ ಕ್ಷೇತ್ರದಲ್ಲಿ ಸಾಹಿತ್ಯವನ್ನು ನೆಚ್ಚಿಕೊಂಡಿರುವಾಗ ಸಾಮಾಜಿಕ ಹೊಣೆಗಾರಿಕೆಯ ಅದರಲ್ಲೂ ಕ್ರಿಯಾಶೀಲತೆಯ ಮಾತು ಅರ್ಥಹೀನವೆಂದು ತೋರಲೂಬಹುದು. ಆದರೆ ಸಾಹಿತಿಗೆ ಎಲ್ಲ ಕಡೆಗಳಲ್ಲಿ ಅಗತ್ಯವಾಗಿ ಇರಬೇಕಾದ ನಿರ್ಭೀತತೆ ಹಾಗೂ ಪ್ರಾಮಾಣಿಕತೆಗಳನ್ನು ಯಾವುದೇ ಕಾರಣದಿಂದ ಆತ ತ್ಯಜಿಸುವ ಸಂದರ್ಭ ಬಂದರೂ ಆತ ತನ್ನ ಸಾಮಾಜಿಕ ಹೊಣೆಗಾರಿಕೆಯಿಂದ ಜಾರಿಕೊಳ್ಳುತ್ತಾನೆ ಎಂದು ಹೇಳಬೇಕಾಗಿದೆ. ಸಾಹಿತಿಯೆಂದೇನು, ಭಾರತೀಯ ಪರಿಸರದಲ್ಲಿ ಬುದ್ಧಿಜೀವಿಗಳು ಎನಿಸಿಕೊಳ್ಳುವವರಲ್ಲಿ ಹೆಚ್ಚಿನವರ ವೈಚಾರಿಕ ಪ್ರಾಮಾಣಿಕತೆಯನ್ನು ಸಂದೇಹದಿಂದ ನೋಡಬೇಕಾದ ಸಂದರ್ಭಗಳು ಹಲವಾರು ಬಂದಿವೆ. ಭಾರತದ ವಿಭಜನೆಯ ಕಾಲದಲ್ಲೂ ಮಾನವೀಯ ಮೌಲ್ಯಗಳ ರಕ್ಷಣೆಯ ಪ್ರಶ್ನೆ ನಮ್ಮ ಮುಂದೆ ಬಂದಿದೆ. ಜಾತೀಯತೆಯ ವಿಷದ ಕುರಿತು ಬರೆದ ಹಲವಾರು ಮಹತ್ವದ ಸಾಹಿತ್ಯ ಕೃತಿಗಳು ಬಂದಿವೆಯಾದರೂ, ಜಾತೀಯ ಹತ್ಯಾಕಾಂಡದ ಸಂದರ್ಭಗಳಲ್ಲಿ ತನ್ನ ಅಭಿಪ್ರಾಯಗಳಿಗೆ ಪ್ರಾಮಾಣಿಕವಾಗಿ ಬದ್ಧರಾಗಿ ನೌಖಾಲಿಯ ದಂಗೆಯ ಪ್ರದೇಶದಲ್ಲಿ ನಡೆದ ಗಾಂಧೀಜಿಯವರ ಉದಾಹರಣೆ ಬೇರೆ ಸಿಗುವುದಿಲ್ಲ. ಅಷ್ಟೇ ಅಲ್ಲ, ಭಾರತದ ವಿಭಜನೆಯ ದುರಂತ ಪ್ರಜ್ಞೆ ಮೌಲ್ಯಗಳನ್ನು ಶೋಧಿಸುವ ಒಂದು ಮಹಾ ಸಾಹಿತ್ಯ ಕೃತಿಯನ್ನು ಹೊರ ತಂದಿದೆಯೆಂದೂ ನನಗನಿಸುವುದಿಲ್ಲ. ಇನ್ನು ವ್ಯಕ್ತಿಯ ಎಲ್ಲ ಸ್ವಾತಂತ್ರ್ಯವನ್ನು ಮೊಟಕುಗೊಳಿಸಿದ ತುರ್ತುಪರಿಸ್ಥಿತಿಯ ಸಂದರ್ಭದಲ್ಲೂ ವೈಚಾರಿಕವಾಗಿ ಅದನ್ನು ವಿರೋಧಿಸಿದರೂ ನಮ್ಮ ಸಾಹಿತಿಗಳು ಅದಕ್ಕಿಂತ ಮುಂದೆ ಹೋದ ಸಾಕಷ್ಟು ನಿದರ್ಶನಗಳು ಕಡಿಮೆ. ನಿರ್ಭೀತತೆ ಪ್ರಾಮಾಣಿಕವಾದುದಾದರೆ ಅದು ತ್ಯಾಗ, ಕಷ್ಟ ಸಹಿಷ್ಣುತೆಗಳನ್ನು ಅನುಭವಿಸುವ ಮಾನಸಿಕ ಸಿದ್ಧತೆಯನ್ನು ಮಾಡಿಕೊಂಡಿರುತ್ತದೆ ಎಂದು ಹೇಳಲಷ್ಟು ಮೇಲಿನ ಮಾತುಗಳು.

ತನ್ನ ಪರಿಸರದಲ್ಲಿ ಮೂರು ರೀತಿಯ ಸ್ವಾರ್ಥಗಳನ್ನು ಒಬ್ಬ ಪ್ರಾಮಾಣಿಕ ಲೇಖಕ ಇದಿರಿಸಬೇಕಾಗುತ್ತದೆ. ಪ್ರತ್ಯಕ್ಷವಾಗಿ ಅಲ್ಲವಾದರೂ ಬೇರೆ ಬೇರೆ ರೀತಿಗಳಲ್ಲಿ ಇವು ಅವನ ಸ್ವಾತಂತ್ರ್ಯ ಹಾಗೂ ಪ್ರಾಮಾಣಿಕತೆಗೆ ಸವಾಲುಗಳನ್ನು ತಂದೊಡ್ಡುವಂಥವು. ಯಾವುದೊಂದು ವ್ಯಕ್ತಿಯನ್ನು ಉದ್ದೇಶಿಸಿ ಯಾವ ಸಾಹಿತಿಯೂ ಬರೆಯುವುದಿಲ್ಲವಾದರೂ ಸಾಹಿತಿಯ ವಿಚಾರಗಳನ್ನು ನಮಗೆ ಅನ್ವಯಿಸಿಕೊಂಡು ಪ್ರತಿಭಟನೆ ತೋರಿಸುವ ಉದಾಹರಣೆಗಳಿವೆ. ಇದು ಸಾಹಿತಿಯ ನಿರ್ಭೀತತೆಗೆ ಒಂದು ಸವಾಲು. ಸಾಮಾಜಿಕವಾಗಿಯೂ ಸಾಹಿತಿ ಬರೆದುದು ಅವಹೇಳನಕಾರಿಯೆಂದು ರೊಚ್ಚಿಗೆದ್ದು ಶಂಕಿಸಿ ಪ್ರತಿಭಟಿಸುವ ಪ್ರಸಂಗಗಳನ್ನೂ ನಾವು ಕರ್ನಾಟಕದಲ್ಲೂ ಕಂಡಿದ್ದೇವೆ. ಮೂರನೆಯದು, ಸಮಷ್ಟಿಯ ಹಿತವೆಲ್ಲ ತನಗೆ ಸೇರಿದೆಯೆಂದು ತಿಳಿದುಕೊಂಡು ಆಡಳಿತೆಯ ಸೂತ್ರ ಹಿಡಿದು ಅಧಿಕಾರ ನಡೆಸುವ ಸರಕಾರ. ಇದು ಸಾಹಿತಿಯ ಪ್ರಾಮಾಣಿಕತೆಯನ್ನು ಶಂಕಿಸುವುದಷ್ಟೇ ಅಲ್ಲ, ಆತನ ಮೌಲ್ಯ ಪ್ರಜ್ಞೆಯೂ ಸರಕಾರ ಒಡ್ಡುವ ಆಮಿಷಗಳಿಗೆ ಬಲಿಯಾಗಬೇಕು ಎನ್ನುವಂಥ ಅಪಾಯಕಾರಿ ವ್ಯವಸ್ಥೆ. ಇತ್ತೀಚಿನ ದಿನಗಳಲ್ಲಿ ಪತ್ರಕರ್ತರೆಲ್ಲ ಇಂತಹ ಆಮಿಷಗಳಿಗೆ ಒಳಗಾದ ಸಾಕಷ್ಟು ಸುದ್ದಿಗಳನ್ನು ನಾವು ಓದಿದ್ದೇವೆ. ಪತ್ರಕರ್ತರಂತೆಯೇ ಸಾಹಿತಿಗಳಿಗೆ ಸರಕಾರ ಒಡ್ಡುವ ಪ್ರಲೋಭನಗಳು ಹಲವಾರು ರೀತಿಯವು. ಇವನ್ನೆಲ್ಲ ಇದಿರಿಸಿ ತನ್ನ ಪ್ರಾಮಾಣಿಕತೆಯನ್ನೂ ನಿರ್ಭೀತ ಮನೋಧರ್ಮವನ್ನೂ ಕಾದುಕೊಳ್ಳುವ ಸಾಹಿತಿ ನಿಜವಾಗಿಯೂ ತನ್ನ ಸಾಮಾಜಿಕ ಹೊಣೆಗಾರಿಕೆ ನಿರ್ವಹಿಸುತ್ತಾನೆಂದು ಹೇಳಬಹುದು. ಇಂತಹ ನಿರ್ಭೀತತೆಯ ಎರಡು ಉದಾಹರಣೆಗಳನ್ನು ಕೊಡಲು ನಾನು ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಶಿವರಾಮ ಕಾರಂತರೂ ಮಹಾರಾಷ್ಟ್ರದ ದುರ್ಗಾ ಭಾಗವತ್ ಅವರೂ ನಡೆದುಕೊಂಡ ರೀತಿಯನ್ನು ನೆನಪಿಸಬಯಸುತ್ತೇನೆ.

# ರಾತ್ರಿ....

ಎನ್.ಕೆ. ಹನುಮಂತಯ್ಯ




ರಾತ್ರಿ. ....
ನನ್ನ ಹೆತ್ತವ್ವ
ಹಟ್ಟಿಯ ಪುಟ್ಟಿಗಳು
ಗೊರಕೆಯೊಡೆಯುವುದೆ ತಡ;
ಹಾಡುತ್ತಾಳೆ. . .
ದೂರದ ಮರೀಚಿಕೆ ಕಂಡು
ಬಾಯಾರಿದ ಕುರಿ ಅರಚುವಂತೆ!

* * *

ಕೀಟಗಳ ಹಿಮ್ಮೇಳದಲಿ
ಉದುರಿದ ಪದಗಳೆಷ್ಟೋ..
ಅವಳ ತೊಯ್ದು ರವಿಕೆಗಷ್ಟೇ ಗೊತ್ತು.
ಅವ್ವ ಹೀರಿದ ಶರಾಪು,
ಎಲೆಯಡಿಕೆ, ಹೊಗೆಪುಡಿ
ನವೆಹತ್ತಿ ನರಳುವ ಹೊತ್ತಿಗೆ
ಹಳ್ಳದಲೆಲ್ಲೋ ಗೂಬೆ ಕೂಗುತ್ತದೆ.

* * *

ಆರಿದ ಒಲೆಯಾಗ
ನನ್ನ ಕರುಳ ಕೋಣೆಯಲಿ
ಹೊತ್ತಿ ಉರಿಯುತ್ತದೆ.
ಆ ಬೆಳಕಿನ ಬಾರೆಯಲಿ
ಸತ್ತ ಹಸುವಿನ ಚಿತ್ರ,
ಎಲ್ಲರೆಲ್ಲೆಯ ದಾಟಿ ಮುತ್ತಿದ ಹದ್ದು.
ಬಗೆ ಬಗೆದು ನುಂಗುವ ಸದ್ದು
ಎದೆಗೊದ್ದಾಗ!
ನಡುಗತ್ತಲ ಹಳ್ಳದಲಿ
ಹಾಲು ಚಿಮ್ಮುತ್ತದೆ!

* * *

ಜೋಗುಳದ ಜೊತೆಗೇ
ಉರಿ ನಿಂತು
ಕಣ್ಣೊಳಗೆ ಅನ್ನದಗುಳು
ಅರಳಿದಾಗ;
ಕಳ್ಳ ಬಸಿರೊಡೆದು
ಬೆಳ್ಳಗಾಗುತ್ತದೆ!

# ಕನ್ನಡವನ್ನು ಕುರಿತು ಯೋಚಿಸುತ್ತ.......

■ *ಬಿ. ಎಸ್. ಜಯಪ್ರಕಾಶ ನಾರಾಯಣ*

2000ನೇ ಇಸವಿಯ ಅಕ್ಟೋಬರ್ ತಿಂಗಳ ಕೊನೆ ದಿನ. ಕನ್ನಡ ರಾಜ್ಯೋತ್ಸವಕ್ಕೆ ಇನ್ನು 10-12 ಗಂಟೆಗಳಷ್ಟೇ ಬಾಕಿ ಇದ್ದವು. ಕನ್ನಡ ರಾಜ್ಯೋತ್ಸವ ಅಂದ ಮೇಲೆ ಕನ್ನಡವನ್ನೂ ಕರ್ನಾಟಕವನ್ನೂ ಹಾಗೆಯೇ ಇಲ್ಲಿಯ ಜನಜೀವನ ಮತ್ತು ಸಂಸ್ಕೃತಿಯನ್ನು ಹಾಡಿ ಹೊಗಳುವ ಚಿತ್ರಗೀತೆಗಳ ಭರಾಟೆ; ಜತೆಗೆ ಬೆಂಗಳೂರು, ಮೈಸೂರುಗಳಂಥ ನಗರಗಳಲ್ಲಿ ಹತ್ತಾರು ಕಡೆ ಭಾಷಣ; 'ಕನ್ನಡವನ್ನು ಉಳಿಸಿ, ಬೆಳೆಸಿ' ಎಂಬ ಕರೆಗಳೂ ಮಾಮೂಲು. ಅಪವಾದವೆಂಬಂತೆ ಎಲ್ಲೋ ಒಂದೆರಡು ಕಡೆ ಅರ್ಥಪೂರ್ಣ ಸಂವಾದ, ಚರ್ಚೆಗಳು ನಡೆಯಬಹುದು.

ಸರ್ಕಾರಿ ಭಾಷೆಯಲ್ಲಿ ರಾಜ್ಯೋತ್ಸವ 'ನಾಡಹಬ್ಬ'. ವಿಚಿತ್ರವೆಂದರೆ, ನೂರಕ್ಕೆ ನೂರರಷ್ಟು ಅಪ್ಪಟ ಕನ್ನಡಿಗರಿರುವ ನಮ್ಮೂರಿನಲ್ಲಿ ಸರ್ಕಾರಿ ಶಾಲೆ ಬಿಟ್ಟು ಇನ್ನೆಲ್ಲೂ ರಾಜ್ಯೋತ್ಸವದ ಆಚರಣೆ ಇಲ್ಲ! ಸರ್ಕಾರಿ ಕಚೇರಿಗಳ ಪಾಲಿಗೆ ಅದು ಮತ್ತೊಂದು ರಜಾ ದಿನ ಅಷ್ಟೇ!! ಭಾರತದಲ್ಲಿ ಎಲ್ಲಾ ನಾಡಹಬ್ಬಗಳ ಗತಿಯೂ ಇದೇನೇ ಎಂದು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲ ಬಿಡಿ.

ಇಂಥ ಅಕ್ಟೋಬರ್ ತಿಂಗಳ ಕೊನೆ ದಿನ ನನ್ನನ್ನು ನೋಡಲೆಂದು ನನ್ನ ಇಬ್ಬರು ಗೆಳೆಯರು ಬಂದರು. ಯೋಗಕ್ಷೇಮದ ಮಾತುಗಳೆಲ್ಲ ಮುಗಿದ ಮೇಲೆ ಈ ಗೆಳೆಯರ ಪೈಕಿ ಒಬ್ಬರು ತಾವು ಬರೆದಿದ್ದ ಒಂದು ಲೇಖನವನ್ನು ನನಗೆ ಕೊಟ್ಟರು. ಅದು ಕನ್ನಡವನ್ನು ಕುರಿತ ಲೇಖನ.

ಅದರಲ್ಲಿ ಬಹುಮುಖ್ಯವಾಗಿ ಕಳೆದ ನೂರು ವರ್ಷಗಳಲ್ಲಿ ಕರ್ನಾಟಕ ರಾಜ್ಯದಲ್ಲಿ ನಡೆದ ಕನ್ನಡ ಚಳವಳಿಗಳ ವಿವರಗಳಿದ್ದವು. ಮೊನ್ನೆಯಷ್ಟೇ ದಂತಚೋರ ವೀರಪ್ಪನ್‌ನ ಕಪಿಮುಷ್ಟಿಯಿಂದ ಬಿಡುಗಡೆಯಾದ ರಾಜ್‌ಕುಮಾರ್ ಪ್ರಸ್ತಾಪ ಕನ್ನಡ ಚಳವಳಿಗೆ ಸಂಬಂಧಿಸಿದಂತೆ ಅಲ್ಲಿದ್ದ ತಾಜಾ ವಿವರ. ಅಲ್ಲದೆ, ಆ ಲೇಖನದಲ್ಲಿ ಕನ್ನಡದ ಮೇಲೆ ದಾಳಿ ನಡೆಸುತ್ತಿರುವ ಇಂಗ್ಲೀಷು ಮತ್ತು ಹಿಂದಿಗಳನ್ನು ತರ್ಕಬದ್ಧವಾಗಿ ಬೆಂಡೆತ್ತಲಾಗಿತ್ತು. ಇವತ್ತು ಯಾರೂ ಬಳಸದೇ ಇರುವ ಸಂಸ್ಕೃತ ಕೂಡ ಇದೇ ಸಾಲಿನಲ್ಲಿತ್ತು.



ಆದರೆ ನನಗೆ ಒಂದು ಕ್ಷಣ ಹಿಂದಿನ ಚಿತ್ರ ನೆನಪಿಗೆ ಬಂತು. ನಾನು ಅರೆಕ್ಷಣದ ಹಿಂದೆ ಕಂಪ್ಯೂಟರ್ ಮುಂದೆ ಕೂತುಕೊಂಡು ಇಂಗ್ಲೀಷಿನಿಂದ ಕನ್ನಡಕ್ಕೆ ಏನನ್ನೋ ಅನುವಾದ ಮಾಡುತ್ತಿದ್ದೆ. ಈ ಲೇಖನದ ಮೇಲೆ

ಕಣ್ಣಾಡಿಸುತ್ತಿದ್ದಂತೆಯೇ ಸಾವಿರ ವರ್ಷಗಳಿಗೂ ಹೆಚ್ಚಿನ ಲಿಖಿತ ಇತಿಹಾಸವುಳ್ಳ ಕನ್ನಡ ಭಾಷೆಯ ಚಿತ್ರ ನನ್ನ ಕಣ್ಮುಂದೆ ಬಂತು. ಅದೇ ಕ್ಷಣದಲ್ಲಿ ಕನ್ನಡದ ಭವಿಷ್ಯ ಹೇಗಿರಬಹುದು ಎಂಬ ಯೋಚನೆಯೂ ಹರಿದಾಡಿತು. ಹುಟ್ಟು ಕನ್ನಡಿಗನಾದ್ದರಿಂದ ಕನ್ನಡ ಕುರಿತ ಯೋಚನೆಯೇ ನನಗೆ ಬಂದಿದ್ದು ಸಹಜ.

ಭಾಷೆಗೆ ಸಂಬಂಧಿಸಿದ ಕೆಲವು ನಿರ್ಣಾಯಕ ಅಂಶಗಳನ್ನು ನಾವೀಗ ಒಂದೊಂದಾಗಿ ನೋಡುತ್ತಾ ಹೋಗೋಣ.

ಒಟ್ಟಾರೆಯಾಗಿ ಕನ್ನಡಿಗನೊಬ್ಬನಿಗೆ ಇವತ್ತು ಇಂಗ್ಲಿಷ್ ಯಾಕೆ ಅನಿವಾರ್ಯ/ಅಗತ್ಯವೆನಿಸುತ್ತಿದೆ, ಕನ್ನಡವನ್ನು ಆಧುನಿಕ ಜಗತ್ತಿನಲ್ಲಿ ಯಾವ್ಯಾವ ಬಗೆಯಲ್ಲಿ ನಾವು ಬೆಳೆಸಬೇಕಾಗಿದೆ ಎಂಬಂಥ ಸಂಗತಿಗಳ ಆಳಕ್ಕೆ ಇಳಿಯುವ ಪ್ರಯತ್ನವಿದು.

### ವಿರೋಧದ ನೆಲೆ

ಇವತ್ತು ನಾವೆಲ್ಲ ಇಂಗ್ಲೀಷನ್ನು ಯಾವುದೋ ಒಂದು ಹಂತದಲ್ಲಿ ವಿರೋಧಿಸುತ್ತೇವೆ. ಇಂಥ ವಿರೋಧ ಕನ್ನಡದ ಅಭಿಮಾನದಿಂದಷ್ಟೇ ಬಂದಿರುವುದಿಲ್ಲ ಅಥವಾ ಕನ್ನಡದ ಭವಿಷ್ಯ ಕುರಿತ ಕಳಕಳಿಯಿಂದಷ್ಟೇ ಈ ಭಾಷಿಕ ವಿರೋಧ ಹುಟ್ಟಿರುವುದಿಲ್ಲ. ನಮ್ಮಲ್ಲಿ ಬಹಳಷ್ಟು ಜನ 'ತಮಗೆ ಇಂಗ್ಲೀಷು ಬರೋದಿಲ್ಲ' ಎಂಬ ಕೀಳರಿಮೆಯ ದ್ರವ್ಯದಿಂದ ಆಂಗ್ಲ ದ್ವೇಷ ಬೆಳೆಸಿಕೊಂಡಿರುತ್ತಾರೆ. ಒಂದು ಹಂತದಲ್ಲಿ ನನಗೂ ಇಂಗ್ಲೀಷ್ ಬಗ್ಗೆ ಇಂಥ ಭಾವನೆಗಳಿದ್ದವು.

ಆದರೆ ಕೆಲಕಾಲದ ಬಳಿಕ ಕೇವಲ ಕನ್ನಡವೊಂದೇ ನನ್ನನ್ನು ಹೊಸ ಜಗತ್ತಿನಲ್ಲಿ ಬದುಕಿಸಲಾರದು ಎಂದು ಗೊತ್ತಾದ ಮೇಲೆ ನಾನು ಪ್ರೀತಿಯಿಂದ ಇಂಗ್ಲೀಷು ಕಲಿಯತೊಡಗಿದೆ. ಅಂದ ಮಾತ್ರಕ್ಕೆ ನಾನು ಕನ್ನಡವನ್ನು ಮರೆತಿದ್ದೇನೆ ಎಂದರ್ಥವಲ್ಲ. ಕನ್ನಡವನ್ನೂ ನಾನು ಇವತ್ತಿಗೂ ಪ್ರೀತಿಯಿಂದ ಕಲಿಯುತ್ತಲೇ ಇದ್ದೇನೆ. ನಾನು ಕನಿಷ್ಠ ಇಂಗ್ಲೀಷನ್ನಾದರೂ ಕಲಿಯಬೇಕೆಂದು ಮನಸ್ಸು ಮಾಡಿದಾಗ ನನಗೂ ನನ್ನ ಗುರುಗಳೊಬ್ಬರಿಗೂ ಎರಡು ವರ್ಷಗಳ ಹಿಂದೆ ನಡೆದ ಒಂದು ಸ್ವಾರಸ್ಯಕರ ಚರ್ಚೆಯನ್ನಿಲ್ಲಿ ಸಾಂದರ್ಭಿಕವಾಗಿ ಉಲ್ಲೇಖಿಸಬಹುದು.

ನನ್ನ ಪತ್ರಿಕೋದ್ಯಮದ ಗುರು ಎಸ್.ಆರ್. ರಾಮಕೃಷ್ಣ ಅವರ ಬಳಿ 'ನಾವೆಲ್ಲ ಹಳ್ಳಿಯಿಂದ ಬಂದೋರು ಸಾರ್. ನಾವೆಲ್ಲಾ ಇಂಗ್ಲೀಷ್ ಕಲೀಬೇಕು ಸಾರ್. ಇಲ್ದಿದ್ರೆ ಬಹಳ ಕಷ್ಟವಾಗುತ್ತೆ.....' ಹೀಗೆಲ್ಲ ಹೇಳಿಕೊಳ್ಳತೊಡಗಿದೆ.

ಈ ಮಾತುಗಳನ್ನು ಗಂಭೀರವಾಗಿ ಕೇಳಿಸಿಕೊಂಡ ಗುರುಗಳು ಮೊದಲಿಗೆ ನನ್ನ ಮಾತನ್ನು ಒಪ್ಪಿದರೂ ಆಮೇಲೆ 'ಇಂಗ್ಲೀಷ್ ಕಲಿಯೋ ಅಗತ್ಯ ಇಲ್ಲ' ಅಂದುಬಿಟ್ಟರು. ಆದರೆ ನಾನು ತರ್ಕಬದ್ಧವಾಗಿ ಇಂಗ್ಲೀಷಿನ ಅಗತ್ಯದ ಬಗ್ಗೆ ಹೇಳತೊಡಗಿದಾಗ, ಇಂಗ್ಲೀಷು ಮಾತನಾಡಲು ಬರದ ನನ್ನಂಥ ಹಳ್ಳಿಯವರು ಎದುರಿಸುವ ಮಾನಸಿಕ ತುಮುಲ ಮತ್ತು ಆತ್ಮ ವಿಶ್ವಾಸದ ಕೊರತೆ ಬಗ್ಗೆ ವಿವರಿಸಿದೆ. ಅದೇ ಕಾಲಕ್ಕೆ ಏಷ್ಯನ್ ಪತ್ರಿಕೋದ್ಯಮ ಕಾಲೇಜ್‌ಗೆ ಜರ್ನಲಿಸಂ ಕಲಿಯಲು ಬಂದಿದ್ದ ಗೆಳೆಯನೊಬ್ಬ ಕೂಡ ಇಂಗ್ಲೀಷು ಬರದ ತನ್ನ ಗೋಳನ್ನು ಎಳೆಎಳೆಯಾಗಿ ವಿವರಿಸತೊಡಗಿದ. ಕೊನೆಗೆ ಇದು ಯಾವ ಫಲ ನೀಡಿತೆಂದರೆ ಏಷ್ಯನ್ ಪತ್ರಿಕೋದ್ಯಮ ಕಾಲೇಜಿನಲ್ಲಿ ಕನ್ನಡ ಮಾಧ್ಯಮದ ಹುಡುಗರಿಗೆ ಪ್ರತ್ಯೇಕ ಇಂಗ್ಲೀಷ್ ತರಗತಿಗಳೇ ಪ್ರಾರಂಭವಾದವು; ಅವರಿಗೆಲ್ಲ ಮಿನಿಮಮ್ ಇಂಗ್ಲೀಷನ್ನು ಕಲಿಸುವ ಅಗತ್ಯವನ್ನು ಕಾಲೇಜು ಮನಗಂಡಿತು.

ಆದರೆ ಇಲ್ಲೊಂದು ಎಚ್ಚರ ಅಗತ್ಯ. ಅದೇನೆಂದರೆ ನಾವು ಇಂಗ್ಲೀಷ್ ಕಲಿಯುತ್ತಲೇ ಕನ್ನಡವನ್ನೂ ಕಲಿಯುತ್ತಿರಬೇಕು. ಆದರೆ ಇಂಥ ಎಚ್ಚರ ಕಳೆದುಕೊಂಡವರೆಲ್ಲ ಇಂಗ್ಲೀಷ್ ಬಲ್ಲವರಾದರೂ ಕನ್ನಡದಲ್ಲಿ ಬರೆಯುವ, ಓದುವ, ಚಿಂತಿಸುವ ವಿಷಯಗಳಲ್ಲಿ ಸೋತಿದ್ದಾರೆ.

ಆದರೆ ಚೆನ್ನಾಗಿ ಇಂಗ್ಲೀಷ್ ಬಲ್ಲವರಾಗಿದ್ದ ನಮ್ಮ ಗುರುಗಳಿಗೇಕೆ ನಾವ್ಯಾರೂ ಇಂಗ್ಲೀಷ್ ಕಲಿಯೋ ಅಗತ್ಯವಿಲ್ಲ ಎನಿಸಿತು? ಬೆಂಗಳೂರಿನಲ್ಲೇ ಹುಟ್ಟಿ ಬೆಳೆದ ಅವರಿಗೆ ಕನ್ನಡದ ಅಗತ್ಯ ಮನವರಿಕೆಯಾಗಿತ್ತೇ? ಅಥವಾ ಇಂಗ್ಲೀಷು ಒಬ್ಬ ವ್ಯಕ್ತಿಗೆ ತಂದುಕೊಡುವ ಆತ್ಮವಿಶ್ವಾಸವನ್ನು ಹುಟ್ಟಿಸುವ ಶಕ್ತಿ ಕನ್ನಡಕ್ಕೂ ಇದೆ ಎಂಬ ಅರಿವಿಗೆ ಅವರು ತಲುಪಿದ್ದರೆ? ಅಥವಾ ಏಳೆಂಟು ವರ್ಷಗಳ ಕಾಲ ಇಂಗ್ಲೀಷ್ ಪತ್ರಿಕೆಯಲ್ಲಿ ಕೆಲಸ ಮಾಡಿದ್ದ ಅವರಿಗೆ ಆ ಭಾಷೆ ಜನರನ್ನು ತಲುಪುತ್ತಿಲ್ಲ ಎಂದು ಗೊತ್ತಿತ್ತೇ? ಅಥವಾ ಬರೀ ಇಂಗ್ಲೀಷು ಮಾತನಾಡುತ್ತಾ ನಮ್ಮ ನಮ್ಮ ಮನೆಭಾಷೆಯನ್ನು ಕಲಿಯದವರ ದೌರ್ಬಲ್ಯ ಏನೆಂದು ಅವರು ಅರಿತಿದ್ದರೇ?

**ಕಣ್ಮುಂದಿನ ವ್ಯವಸ್ಥೆ**

ಗಾಂಧೀ ವಾದ ಅಥವಾ ಲೋಹಿಯಾ ಇಂಗ್ಲೀಷ್ ವಿರುದ್ಧ ನಡೆಸಿದ ಹೋರಾಟದ ಬಲದಿಂದ ನಾವು ಇಂಗ್ಲೀಷನ್ನು ಬಲು ಅರ್ಥಪೂರ್ಣವಾಗಿ ವಿರೋಧಿಸಬಹುದು. ಆದರೆ ನಮ್ಮ ಕಣ್ಮುಂದಿನ ವ್ಯವಸ್ಥೆ ಇವತ್ತು ಬದುಕುತ್ತಿರುವವನಿಗೆ ಮುಖ್ಯವಾಗುತ್ತದೆ.

ಈಗ ನೋಡಿ. ಇಂಗ್ಲೀಷ್ ಜಗತ್ತಿನ ಎಲ್ಲ ಭಾಷೆಗಳ ಮೇಲೆ ಸವಾರಿ ನಡೆಸುತ್ತಿದೆ ಎಂಬ ಸಂಗತಿ ನಮಗೆಲ್ಲ ಗೊತ್ತಿದೆ. ಇದು ಸತ್ಯ. ಇದೇನೂ ಇಂಗ್ಲೀಷ್ ವಿರೋಧಿಗಳು ವಿನಾ ಕಾರಣ ಎಬ್ಬಿಸುತ್ತಿರುವ ಕೂಗೇನಲ್ಲ. ವೈಯಕ್ತಿಕವಾಗಿ ಸ್ವಲ್ಪ ಇಂಗ್ಲೀಷ್ ಮಾತಾಡಲು ಬಲ್ಲ ನಾನೂ ಕೂಡ ಇಂಗ್ಲೀಷು ನಡೆಸುತ್ತಿರುವ ಸವಾರಿ ಬಗ್ಗೆ ತಲೆ ಕೆಡಿಸಿಕೊಂಡಿದ್ದೇನೆ.

ಆದರೆ ಇಲ್ಲಿ ಒಂದು ಅಂಶ ಮುಖ್ಯ. ಇಂಗ್ಲೀಷಿನ ಕೇಂದ್ರಸ್ಥಾನದ ವಿಚಾರವಿದು. 50-60 ವರ್ಷಗಳ ಹಿಂದೆ (100 ವರ್ಷಗಳ ಹಿಂದೆ ಎಂದು ಬೇಕಾದರೂ ಇಟ್ಟುಕೊಳ್ಳೋಣ) ಇಂಗ್ಲೀಷಿನ ಕಾರುಬಾರು ನಡೆಯುತ್ತಿದ್ದುದು ಲಂಡನ್‌ನಿಂದ. ಆದರೀಗ ಇದು ವಾಷಿಂಗ್ಟನ್‌ಗೆ ಪಲ್ಲಟಗೊಂಡಿದೆ. ಹೀಗೆ ಇಂಗ್ಲೀಷ್ ಕಾರುಬಾರಿನ ಕೇಂದ್ರಬಿಂದು ಪಲ್ಲಟಗೊಳ್ಳಲು ಇರುವ ಕಾರಣ ಮುಖ್ಯವಾಗಿ ಎರಡು. ಒಂದು, ಆಳುವ ಸಾಮರ್ಥ್ಯ; ಇನ್ನೊಂದು, ಆರ್ಥಿಕ ಚೈತನ್ಯ.

ಇದನ್ನು ಸ್ವಲ್ಪ ಬಿಡಿಸಿಕೊಳ್ಳೋಣ. ಜಗತ್ತಿನ ಹಲವು ಕಡೆ ತನ್ನ ವಸಾಹತುಗಳನ್ನು ನಿರ್ಮಿಸುವಾಗ ಪ್ರಬಲವಾಗಿದ್ದ ಬ್ರಿಟನ್‌ಗೆ ಈಗ ಅಂತಾರಾಷ್ಟ್ರೀಯವಾಗಿ ಯಾವ ಕಿಮ್ಮತ್ತೂ ಇಲ್ಲ. ಅದು ವಿಶ್ವದ ಪ್ರಬಲ ರಾಷ್ಟ್ರಗಳ ಜಿ-7 ಗುಂಪಿನಲ್ಲಿ ಇದ್ದರೂ ಅದು ಯಾವ ವಿಷಯಗಳಲ್ಲೂ ಇವತ್ತು ನಿರ್ಣಾಯಕವಲ್ಲ. ಇನ್ನು ಆರ್ಥಿಕವಾಗಿಯೂ ಬ್ರಿಟನ್ ಅಮೆರಿಕದ ಮುಂದೆ ಏನೇನೂ ಅಲ್ಲ. ಕಳೆದ ಶತಮಾನಗಳಲ್ಲಿ ಬ್ರಿಟನ್‌ಗಿದ್ದ ಶಕ್ತಿ ಈಗ ಅಮೆರಿಕದ್ದಾಗಿದೆ.

ಇಡೀ ಯೂರೋಪ್ ಆರ್ಥಿಕವಾಗಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ಎಷ್ಟು ಜರ್ಜರಿತವಾಗಿದೆ ಎಂದರೆ ಅಮೆರಿಕದ 'ಡಾಲರ್ ಪವರ್' ಎದುರು ಸ್ವಲ್ಪವಾದರೂ ತಲೆ ಎತ್ತಿ ನಿಲ್ಲಲು ಅದು ಇಡೀ ಯೂರೋಪ್ ಖಂಡಕ್ಕೆ ಅನ್ವಯವಾಗುವಂತೆ 'ಯೂರೋ' ಕರೆನ್ಸಿ ತರಬೇಕಾಯಿತು. ಆದರೆ ಅಸ್ತಿತ್ವಕ್ಕೆ ಬರುವಾಗ ಭಾರೀ ಸದ್ದು ಮಾಡಿದ 'ಯೂರೋ', ಡಾಲರ್ ಎದುರು ಸದ್ಯಕ್ಕಂತೂ ಗೆಲ್ಲುವ

ಲಕ್ಷಣಗಳಿಲ್ಲ. ಅರ್ಥಾತ್ ಆಳುವ ಸಾಮರ್ಥ್ಯ ಮತ್ತು ಆರ್ಥಿಕ ಚೇತನವಾಗಿ ಬೆಳೆದಿರುವ ಅಮೆರಿಕ ವಿಶ್ವದ ದುರ್ಬಲ ರಾಷ್ಟ್ರಗಳ ಮೇಲೆ ಸವಾರಿ ಮಾಡುವುದು ಸುಲಭ ಸಾಧ್ಯವಾಗಿದೆ. ಅಂದರೆ ಒಂದು ಕಾಲದಲ್ಲಿ ಬ್ರಿಟನ್ನಿನ ಇಂಗ್ಲೀಷು ನಡೆಸುತ್ತಿದ್ದ ಸವಾರಿಯನ್ನು ಇವತ್ತು ಅಮೆರಿಕನ್ ಇಂಗ್ಲೀಷು ಮಾಡುತ್ತಿದೆ.

ಆದರೆ ಪಶ್ಚಿಮದ ಕೆಲರಾಷ್ಟ್ರಗಳು ಮತ್ತು ಇನ್ನೊಂದೆಡೆ ಜಪಾನ್ ಅಮೆರಿಕಕ್ಕೆ ಸಡ್ಡು ಹೊಡೆದಿರುವುದನ್ನು ನಾವು ಗಮನಿಸಬಹುದು. ಬೆರಳೆಣಿಕೆಯಷ್ಟು ರಾಷ್ಟ್ರಗಳಾದರೂ ಅಮೆರಿಕನ್ ಇಂಗ್ಲಿಷ್ ವಿರುದ್ಧ ನಿಲ್ಲಲು ಆ ರಾಷ್ಟ್ರಗಳು ಆರ್ಥಿಕವಾಗಿ ಬೆಳೆದಿರುವುದು ಪ್ರಮುಖ ಕಾರಣ.

ಆದರೆ ಒಂದು ಊರಿಗೆ ಲೈಟುಕಂಬ ಎಳೆಯಲು, ಇನ್ನೊಂದು ಊರಿಗೆ ನೀರಿನ ಟ್ಯಾಂಕ್ ಕಟ್ಟಲು, ಮತ್ತೊಂದು ಊರಿಗೆ ಚರಂಡಿ ತೋಡುವುದಕ್ಕೆ, ಮಗದೊಂದು ಊರಿನ ರೋಡಿಗೆ ಟಾರು ಹಾಕುವಂಥ ಯಃಕಶ್ಚಿತ್ ಕೆಲಸಗಳಿಗೆಲ್ಲ ಐಎಂಎಫ್ ಮುಂದೂ, ಅಮೆರಿಕದ ಮುಂದೂ ಹಲ್ಲು ಕಿರಿದುಕೊಂಡು ನಿಲ್ಲುವ ಭಾರತಕ್ಕಾಗಲೀ, ಕರ್ನಾಟಕಕ್ಕಾಗಲೀ ಜಪಾನ್ ತೋರಿಸಿದ ತಾಕತ್ತನ್ನು ಪ್ರದರ್ಶಿಸುವುದಾಗಲೀ, ಇಂಗ್ಲೀಷ್ ವಿರೋಧಿ ಇಚ್ಛಾಶಕ್ತಿಯನ್ನಾಗಲೀ ತೋರಿಸುವುದು ಸಾಧ್ಯವಿಲ್ಲ. ಹೀಗಾದಾಗ ನಾವು ಇಂಗ್ಲೀಷಿನ/ಅಮೆರಿಕದ ಗುಲಾಮರಾಗದೆ ಬೇರಾವ ದಾರಿಯೂ ಇಲ್ಲ. ಯಾಕೆಂದರೆ ಐಎಂಎಫ್‌ನಲ್ಲೂ ವಿಶ್ವಸಂಸ್ಥೆಯಲ್ಲೂ ಅಮೆರಿಕದ್ದೇ ಯಜಮಾನಿಕೆ ತಾನೇ?

ನಾವು ನಮ್ಮ ಭಾಷೆಯನ್ನೂ ಸಂಸ್ಕೃತಿಯನ್ನೂ ಉಳಿಸಬೇಕು ಎನ್ನುವುದೇನೋ ನಿಜ. ಆದರೆ ಅದು ಕೇವಲ ಅಭಿಮಾನದಿಂದಷ್ಟೇ ಸಾಧ್ಯವಿಲ್ಲ. ಒಂದು ಭಾಷೆಯನ್ನು ಪ್ರೀತಿಸುವುದರ ಜತೆಜತೆಗೇ ಅದರ ಇನ್ನಿತರ ಆಯಾಮಗಳ ಬೆಳವಣಿಗೆ ಕೂಡ ಅತ್ಯಗತ್ಯ. ಚಳವಳಿ, ಹೋರಾಟಗಳೆಲ್ಲ ಒಂದು ಹಂತದವರೆಗೆ ಕೆಲಸ ಮಾಡಬಲ್ಲದು ಎಂಬುದರಲ್ಲಿ ಎರಡು ಮಾತಿಲ್ಲ.

ಈಗ ನೋಡಿ, ನಾವು ನೀವೆಲ್ಲ ಕನ್ನಡದ ಪರವಾಗಿ ಮಾತಾನಾಡುತ್ತೇವೆ. ಆದರೆ ಕನ್ನಡವನ್ನು ಆರ್ಥಿಕವಾಗಿ, ಔದ್ಯೋಗಿಕವಾಗಿ, ಶೈಕ್ಷಣಿಕವಾಗಿ, ಸಂವಹನಾತ್ಮಕವಾಗಿ ಎಷ್ಟರ ಮಟ್ಟಿಗೆ ಬೆಳಸಿದ್ದೀವಿ?

ಆದರೆ ಇಂಗ್ಲೀಷಿನ ಸ್ಥಿತಿ ಹೀಗಿಲ್ಲ. ಇಂಗ್ಲೀಷಿಗೆ ಕೋಟ್ಯಂತರ ಜನರಿಗೆ ಬದುಕುವ ಅವಕಾಶಗಳನ್ನು ಸೃಷ್ಟಿಸುವ ಶಕ್ತಿ ಇದೆ. ಶಿಶುವಿಹಾರದಿಂದ ಹಿಡಿದು ಉನ್ನತಾತಿ ಉನ್ನತ ಅಧ್ಯಯನದವರೆಗೆ ಶಿಕ್ಷಣ ಪೂರೈಸುವ ಶಕ್ತಿ ಆ ಭಾಷೆಗಿದೆ. ಸ್ವಲ್ಪಮಟ್ಟಿಗೆ ಭಾರತದಲ್ಲಿ ಹಿಂದಿಗೆ ಈ ಶಕ್ತಿ ಇರಬಹುದು ಎಂಬುದು ನನ್ನ ಊಹೆ. ಆದರೆ ಕನ್ನಡಕ್ಕೆ ಈ ಶಕ್ತಿ ಇದೆಯಾ? ಈ ಪ್ರಶ್ನೆಯನ್ನು ನಾವೆಲ್ಲ ಹಾಕಿಕೊಳ್ಳಬೇಕು.

ಕನ್ನಡದ ಮಿತಿಗಳ ಬಗ್ಗೆ ನನಗೊಂದಿಷ್ಟು ಖಚಿತ ತೀರ್ಮಾನಗಳಿವೆ. ಎಸ್ಸೆಸ್ಸೆಲ್ಸಿ ನಂತರ ಕನ್ನಡದಲ್ಲಿ ಶಿಕ್ಷಣ ಎಲ್ಲಿದೆ? ಬಿ.ಎ. ಥರದ ಡಿಗ್ರಿಯಲ್ಲಿ ಕನ್ನಡ ಇದೆ ಎನ್ನುವುದನ್ನು ಬೇಕಾದರೆ ವಾದಕ್ಕೆ ಎಳೆದುಕೊಂಡು ಬರಬಹುದು. ಆದರೆ ಬಿ.ಎ.ಯಲ್ಲಿ ಕನ್ನಡ ಮಾಧ್ಯಮದಲ್ಲಿ ಅರ್ಥಶಾಸ್ತ್ರ ಓದಿದ ಹುಡುಗನೊಬ್ಬ ಸ್ನಾತಕೋತ್ತರ ಮಟ್ಟದಲ್ಲಿ ಅದೇ ವಿಷಯವನ್ನು ಕನ್ನಡದಲ್ಲಿ ಅಭ್ಯಸಿಸುವ ಅವಕಾಶವಿಲ್ಲ. ಒಂದು ವೇಳೆ ಹುಡುಗನೊಬ್ಬ ಕನ್ನಡಕ್ಕೇ ಅಂಟಿಕೊಂಡು ಸ್ನಾತಕೋತ್ತರ ಮಟ್ಟದಲ್ಲೂ ಓದಿದ ಅನ್ನಿ. ವ್ಯಾವಹಾರಿಕವಾಗಿ ಜಾಸ್ತಿಯೇ ಅನ್ನಬಹುದಾದ ನಷ್ಟ ಅವನ ಪಾಲಿಗೆ ಎದುರಾಗುತ್ತದೆ.

ಉದಾಹರಣೆಗೆ ಗೆಳೆಯನೊಬ್ಬನ ಕತೆ ನೋಡೋಣ. ಎಂ.ಎ. ಜತೆಗೆ ಮತ್ತಷ್ಟು ಓದಿರುವ ಈ ಗೆಳೆಯನಿಗೆ ನಿರುದ್ಯೋಗ. ಕೆಲಸಕ್ಕೆ ತಡಕಾಡುತ್ತಿದ್ದ ಅವನಿಗೆ ಯಾವುದೋ ಆಫೀಸ್‌ನಲ್ಲಿ ಕೆಲವು

ಹುದ್ದೆಗಳಿಗೆ ಅರ್ಜಿ ಆಹ್ವಾನಿಸಿದ್ದು ಕಾಣಿಸಿತು. ಈತನೂ ಅರ್ಜಿ ಹಾಕಿದ; ಪರೀಕ್ಷೆ ಬರೆಯಲೂ ಕರೆ ಬಂತು. ಆದರೆ ಯಾವುದಾದರೂ ಕೆಲಸಕ್ಕೆ ಹುಡುಕಾಡುತ್ತಿದ್ದ ಈತ ಪರೀಕ್ಷೆಗೇ ಹೋಗಲಿಲ್ಲ. ಇದಕ್ಕೆ ಕಾರಣ ಒಂದೇ. ಅದೆಂದರೆ, ಅವನಿಗೆ ಸ್ವಲ್ಪವಾದರೂ ಇಂಗ್ಲೀಷ್ ಗೊತ್ತಿರಲಿಲ್ಲ. ಆದರೆ ಕೆಲಸ ಕೊಡುವವರು ಇಂಗ್ಲೀಷನ್ನು ಅಪೇಕ್ಷಿಸಿದ್ದರು.

ಕನ್ನಡ ನಾಡಿನಲ್ಲಿ ಹುಟ್ಟಿ - ಬೆಳೆದವನಿಗೆ ಕೆಲಸ ಕೊಡುವಾಗ ಇಂಗ್ಲೀಷ್ ಬರಬೇಕೆಂದು ಅಪೇಕ್ಷಿಸುವುದು ಮಾತೃದ್ರೋಹದ ಕೆಲಸ ಎಂಬುದೇನೋ ನಿಜ. ಆದರೆ ಉದ್ಯೋಗ ಚೇತನವಾಗಿ ಕನ್ನಡ ಬೆಳೆಯದೆ ಇರುವುದರಿಂದ ಹೀಗಾಗುತ್ತಿದೆ ಎನ್ನುವುದೂ ಅಷ್ಟೇ ನಿಜ. 'ಎಲ್ಲಿಗೇ ಹೋದರೂ ಗುಜರಾತಿಗಳು ತಮ್ಮ ಭಾಷೆ-ಸಂಸ್ಕೃತಿಯನ್ನು ಬೆಳೆಸಿಕೊಂಡು ಹೋಗುತ್ತಾರೆ' ಎನ್ನುವ ಯು. ಆರ್. ಅನಂತಮೂರ್ತಿಗಳ ಮಾತನ್ನು ಒಪ್ಪುವುದಾದರೆ ಗುಜರಾತಿಗಳ ಈ ವಿಶ್ವಾಸಕ್ಕೆ ಕಾರಣ ಅವರು ಆರ್ಥಿಕವಾಗಿ ಬೆಳೆದಿರುವುದು.

ಹಿಂದೆ ಸಂಸ್ಕೃತ ಕೂಡ ಸತ್ತಿದ್ದು ಕೇವಲ 'ದೇವಭಾಷೆ' ಎಂಬೊಂದೇ ಕಾರಣಕ್ಕಾಗಿ ಅಲ್ಲ. ಸಂಸ್ಕೃತ ಸಾಯಲು ಇದು ಒಂದು ಕಾರಣ ಅಷ್ಟೇ. ಸಂಸ್ಕೃತ ಉದ್ಯೋಗ ಸೃಷ್ಟಿಸುವಂಥ ಭಾಷೆಯಾಗಿ ಬೆಳೆಯದೆ ಇದ್ದುದು ಕೂಡ ಅದರ ಸಾವಿಗೆ ಅತ್ಯಂತ ಪ್ರಮುಖ ಕಾರಣ. ಈ ದೇಶದ ಬ್ರಾಹ್ಮಣರು ಕೂಡ ಕಾಲಕ್ರಮೇಣ ಸಂಸ್ಕೃತವನ್ನು ಮರೆಯಲೂ ಇದೇ ಕಾರಣ. ಇಂದು ಕನ್ನಡ ನಾಡಿನಲ್ಲಿರುವ ನೂರಕ್ಕೆ ತೊಂಬತ್ತೊಂಬತ್ತರಷ್ಟು ಬ್ರಾಹ್ಮಣರು ಕೂಡ ಸಂಸ್ಕೃತ ಶ್ಲೋಕಗಳನ್ನು ಕನ್ನಡ ಲಿಪಿಗಳಲ್ಲಿ ಮುದ್ರಿತವಾಗಿರುವ ಶ್ಲೋಕ ಪಠ್ಯಗಳ ನೆರವಿನಿಂದಲೇ ಪಠಿಸುತ್ತಿದ್ದಾರೆ. ಯಾಕೆಂದರೆ, ಸಂಸ್ಕೃತ ನಂಬಿಕೊಂಡರೆ ಉಪವಾಸವೇ ಗತಿ ಎಂಬುದು ಇವರಿಗೆಲ್ಲ ಮನದಟ್ಟಾಗಿದೆ.

ಗೆಳೆಯನ ಲೇಖನದಲ್ಲಿ ಒಂದೆಡೆ 'ಬ್ರಾಹ್ಮಣರು ಸಂಸ್ಕೃತ ಕೈಬಿಟ್ಟು ಇಂಗ್ಲೀಷನ್ನು ತಮ್ಮ ಗುರಾಣಿಯನ್ನಾಗಿ ಬಳಸಿಕೊಳ್ಳಲು ಪ್ರಾರಂಭಿಸಿದರು' ಎಂದೂ ವಿವರಿಸಲಾಗಿತ್ತು. ಇಲ್ಲಿ ಇಂಗ್ಲೀಷನ್ನು ಹಿಡಿದುಕೊಂಡು ತಮಗಿಂತ ಕೆಳಗಿರುವವರನ್ನೆಲ್ಲ ಆಳಬೇಕೆಂಬ ಆಸೆ ಬ್ರಾಹ್ಮಣರಿಗಿತ್ತು ಎನ್ನುವುದಕ್ಕಿಂತ ಇಂಗ್ಲೀಷ್ ಕಲಿಯದಿದ್ದರೆ ತಮಗೆ ಬದುಕೇ ಇಲ್ಲ ಎಂಬ ಭಯವೂ ಅವರನ್ನು ಅಲ್ಲಾಡಿಸಿ ಹಾಕಿತು ಎಂಬುದು ಅನುಭವದ ಮಾತು.

**ಮತ್ತೊಂದು ಮುಖ**

ಭಾಷೆ-ಸಂಸ್ಕೃತಿಗಳ ವಿಚಾರಕ್ಕೆ ಬಂದರೆ ಫೆಡರಲ್ ಇಂಡಿಯಾದಲ್ಲಿ ಮತ್ತೊಂದು ಥರದ ಸಮಸ್ಯೆ ಇದೆ. ಇಲ್ಲಿ ಭಾಷೆ-ಸಂಸ್ಕೃತಿಗಳ ವಿಚಾರದಲ್ಲಿ ಕೇವಲ ಆರ್ಥಿಕ ಶಕ್ತಿಯಷ್ಟೇ ಕೆಲಸ ಮಾಡುವುದಿಲ್ಲ ಅಥವಾ ಆಳುವ ಗುಣವಷ್ಟೇ ಪ್ರಭಾವ ಬೀರುವುದಿಲ್ಲ. ಜಾತಿ ಕೂಡ ಇಲ್ಲಿ ಪ್ರಭಾವ ಬೀರುತ್ತದೆ. ಯಾಕೆಂದರೆ ಜಾತಿಯನ್ನು ಪಕ್ಕಕ್ಕಿಟ್ಟು ಏನನ್ನಾದರೂ ಕಲ್ಪಿಸಿಕೊಳ್ಳುವುದು ಇಂಡಿಯಾದಲ್ಲಿ ಎಂಥ ಜಾತ್ಯತೀತನಿಗೂ ಸಾಧ್ಯವಿಲ್ಲ. ಇಲ್ಲಿ ವ್ಯಕ್ತಿಯೊಬ್ಬನ ಆರ್ಥಿಕತೆಗಿಂತ ಹೆಚ್ಚಾಗಿ ಜಾತಿ-ಜನಾಂಗಗಳು ವಿಪರೀತ ಶಕ್ತಿಶಾಲಿಯಾಗಿವೆ ಎಂಬುದು ಸತ್ಯ.

ಹಣಕಾಸಿನ ವಿಚಾರದಲ್ಲಿ ಸ್ವಲ್ಪ ಗಟ್ಟಿಗನಾಗಿರುವ ಯಾವ ಬ್ರಾಹ್ಮಣೇತರನನ್ನೇ ತೆಗೆದುಕೊಳ್ಳಿ. ಅವನು ನಿಧಾನವಾಗಿ ತನಗಿಂತ ಮೇಲಿರುವ ಜಾತಿಯವರನ್ನು ಅನುಕರಿಸ ತೊಡಗುತ್ತಾನೆ.

ಉದಾಹರಣೆಗೆ, ಬ್ರಾಹ್ಮಣೇತರರೂ ಕೂಡ ಈಚೀಚೆಗೆ ಸತ್ಯನಾರಾಯಣ ಪೂಜೆ

ಮಾಡಿಸುತ್ತಿರುವುದನ್ನು ಗಮನಿಸಬಹುದು. ಇದು ಬ್ರಾಹ್ಮಣರ ಹುನ್ನಾರವೇ ಅಥವಾ ಆರ್ಥಿಕವಾಗಿ ಬಲಾಢ್ಯನಾಗಿರುವ ಬ್ರಾಹ್ಮಣೇತರ ವ್ಯಕ್ತಿ ಉದ್ದೇಶಪೂರ್ವಕವಾಗಿ ಮಾಡುವ ಪ್ರದರ್ಶಕ ಕೆಲಸವೇ?

ಇಂಡಿಯಾದಲ್ಲಿ ವ್ಯಕ್ತಿಯೊಬ್ಬನ ಕಣ್ಮುಂದೆ ಬಂದು ನಿಲ್ಲುವ ಆದರ್ಶಗಳಲ್ಲಿ ಜಾತಿ ಕೂಡ ಕೆಲಸ ಮಾಡುತ್ತದೆ. ಇದು ತಪ್ಪೋ ಸರಿಯೋ ಎಂಬುದು ಮತ್ತೊಂದು ಸ್ವಾರಸ್ಯಪೂರ್ಣ ವಸ್ತುವಾಗಬಲ್ಲದು. ಆದರೆ ವಿಪರೀತ ಆಳಕ್ಕಿಳಿದಿರುವ ಜಾತಿಯ ಬೇರುಗಳನ್ನು ಅಲ್ಲಾಡಿಸಬಹುದು ಎಂಬುದು ತೀರಾ ಅಸಂಭವವಾಗಿ ಕಾಣುತ್ತಿದೆ. ಯಾಕೆಂದರೆ ಜಾತಿ ಒಂದೆಡೆ ಮಸುಕಾಗುತ್ತಿದ್ದಂತೆಯೇ ಮತ್ತೊಂದು ಹೊಸ ರೂಪ ತೊಟ್ಟು ಬರುತ್ತಿದೆ. ಇನ್ನೊಂದೆಡೆ ಜಾತ್ಯತೀತವಾದಿಗಳು ಕೂಡ ಗುಟ್ಟಾಗಿ ತಮ್ಮ ಜಾತಿ ತಮಗೆ ನೀಡುವ ಶಕ್ತಿ / ಸವಲತ್ತು / ಐಡೆಂಟಿಟಿಗಳನ್ನು ಇಷ್ಟಪಡುತ್ತಿರುತ್ತಾರೆ. ಹೀಗಾಗಿ ಆಧುನಿಕ ಭಾರತದಲ್ಲಿ ಜಾತಿ ವಿರೋಧಿ ಆಂದೋಲನಗಳು ಕಣ್ಣು ಬಿಟ್ಟಿಲ್ಲ.

ಭಾಷೆ-ಸಂಸ್ಕೃತಿಗಳ ವಿಚಾರದಲ್ಲಿ ನಮ್ಮಲ್ಲಿ ಹೇಗೆ ಅನುಕರಣೆ ನಡೆಯುತ್ತಿದೆ ಎಂಬುದಕ್ಕೆ ಇದು ಪುರಾವೆಯಾಗಬಲ್ಲದು. ಇದು ಮೇಲ್ಜಾತಿಗಳ ಭಾಷೆ-ಸಂಸ್ಕೃತಿಗಳ ಪರವಾಗಿ ಮಂಡಿಸುತ್ತಿರುವ ವಕಾಲತ್ತಲ್ಲ.

ಇರಲಿ, ಮತ್ತೆ ಕನ್ನಡ-ಇಂಗ್ಲೀಷ್ ಕುರಿತ ವಿಚಾರಗಳಿಗೆ ಹೋಗೋಣ. ಇಂಗ್ಲಿಷ್ ಕಲಿಯುವುದು ಎಷ್ಟು ಮುಖ್ಯವಾಗಿ ಪರಿಣಮಿಸಿದೆಯೋ ಅದಕ್ಕಿಂತ ಹೆಚ್ಚಾಗಿ ಕನ್ನಡ ಕಲಿಯುವುದು ಇನ್ನೂ ಹೆಚ್ಚು ಮುಖ್ಯ ಎಂದು ಈಗಾಗಲೇ ಹೇಳಿಯಾಗಿದೆ.

ಕನ್ನಡವನ್ನೇ ನೆಟ್ಟಗೆ ಕಲಿಯದೆ ಇಂಗ್ಲೀಷ್ ಕಲಿಯಲು ಹೋಗಿ ಹಳ್ಳಕ್ಕೆ ಬೀಳುವವರು ನಮ್ಮಲ್ಲಿ ಜಾಸ್ತಿ. ಉದಾಹರಣೆಗೆ ಮತ್ತೆ ಗೆಳೆಯರ ವರ್ತುಲಕ್ಕೆ ಹೋಗೋಣ.

**ಮೊದಲು ಕನ್ನಡ**

ಚಿಕ್ಕನಾಯಕನಹಳ್ಳಿ ತಾಲೂಕಿನಲ್ಲಿರುವ ಒಂದು ಪುಟಾಣಿ ಊರಿನಲ್ಲಿ ಹುಟ್ಟಿದ ಗಣೇಶ ಇಂಥ ಸಮಸ್ಯೆ ಎದುರಿಸಿದ ಹುಡುಗ. 7ನೇ ತರಗತಿವರೆಗೂ ಕನ್ನಡ ಮಾಧ್ಯಮದಲ್ಲೇ ಓದಿದ ಇವನು ಪ್ರತಿಭಾವಂತ ಎಂಬುದರಲ್ಲಿ ಅನುಮಾನವಿಲ್ಲ. ಆದರೆ ಇವನ ಮನೆಯವರು 8ನೇ ಕ್ಲಾಸಿಗೆ ಸೇರಿಸುವಾಗ ಇಂಗ್ಲೀಷ್ ಮೀಡಿಯಂಗೆ ಹಾಕಿದರು. ಅಕಾಡೆಮಿಕ್ ದೃಷ್ಟಿಯಿಂದ ಆತ ಎಲ್ಲೂ ಫೇಲಾಗದಿದ್ದರೂ ಇಂಗ್ಲೀಷ್ ಆತನನ್ನು ಅಸಹಾಯಕನನ್ನಾಗಿ ಮಾಡಿತ್ತು. ಆಮೇಲೂ ಅವನನ್ನು ಪಿಯುಸಿ, ಡಿಗ್ರಿಯಲ್ಲಿ ಅವನ ಮನೆಯವರೂ, ನೆಂಟರಿಷ್ಟರೂ ಸೇರಿ ಮತ್ತೆ ಇಂಗ್ಲೀಷ್ ಮೀಡಿಯಂಗೇ ಹಾಕಿದರು. ಮತ್ತೆ ಅವನ ಗೋಳು ಮುಂದುವರಿಯಿತು. ನಂತರ ಕಷ್ಟಪಟ್ಟು ಬಿ.ಎಸ್ಸಿ ಮಾಡಿಕೊಂಡ ಮೇಲೆ ಸ್ನಾತಕೋತ್ತರ ಪದವಿಯನ್ನು ಕನ್ನಡ ಮಾಧ್ಯಮದಲ್ಲೇ ಓದಿದ ಮೇಲೆಯೇ ಅವನಿಗೆ ಕಳೆದುಹೋಗಿದ್ದ ಆತ್ಮವಿಶ್ವಾಸ ಮರಳಿ ಬಂದಿದ್ದು. ಅಂದರೆ ಆ ವೇಳೆಗೆ ಅವನಿಗೆ ಕನ್ನಡದ ಅಗತ್ಯ ಗೊತ್ತಾಗಿತ್ತು.

ಆದರೆ ಎಂ.ಎ. ಮುಗಿಸಿಕೊಂಡು ಕೆಲಸಕ್ಕೆ ಸೇರಿದ ಗಣೇಶನಿಗೆ 'ನನಗೆ ಸರಿಯಾಗಿ ಇಂಗ್ಲೀಷ್ ಬರುವುದಿಲ್ಲವಲ್ಲಪ್ಪಾ.....ಏನ್ಮಾಡೋದು?' ಎಂಬ ಕೀಳರಿಮೆ ಅವನನ್ನು ಕೊರೆಯಲು ಶುರು ಮಾಡಿತು. 8ನೇ ಕ್ಲಾಸಿನಿಂದ ಬಿ.ಎಸ್ಸಿ ಮುಗಿಸುವ ತನಕ (ಸರಿಯಾಗಿ 10 ವರ್ಷ) ಇಂಗ್ಲೀಷ್ ಮಾಧ್ಯಮದಲ್ಲೇ ಓದಿದ ಅವನಿಗೂ ಯಾಕೆ ಇಂಗ್ಲೀಷ್ ಬರಲಿಲ್ಲ? ಕನ್ನಡವೇ ಸರಿಯಾಗಿ ಬರದಿದ್ದಾಗ ಇಂಗ್ಲೀಷ್ ಮೀಡಿಯಂಗೆ ಅವನನ್ನು ಸೇರಿಸಿದ್ದು ಇದಕ್ಕೆ ಕಾರಣ.

ಈ ಕತೆಯಿಂದ ಕರ್ನಾಟಕಕ್ಕಿರುವ (ಭಾರತಕ್ಕೂ) ಒಂದು ವಿಶಿಷ್ಟ ಅಗತ್ಯ ಗೊತ್ತಾಗುತ್ತದೆ. ಅಂದರೆ ನಾವಿಲ್ಲಿ ಮೊದಲು ಕನ್ನಡವನ್ನು ಚೆನ್ನಾಗಿ ತಿಳಿದುಕೊಂಡು, ಆಮೇಲೆ ಇಂಗ್ಲೀಷ್ ಕಲಿತುಕೊಂಡರೆ ನಿಜವಾಗಿ ಅಸ್ತಿತ್ವದಲ್ಲಿರಬಹುದು. ಇಲ್ಲದಿದ್ದರೆ ಕಷ್ಟ.

ಯಾಕೆಂದರೆ ಕನ್ನಡಕ್ಕೆ ಬದುಕಿಗೆ ತೀರಾ ಅಗತ್ಯವಾದ ಲೋಕಜ್ಞಾನ ತಂದುಕೊಡುವ ಶಕ್ತಿ ಇದೆ. ಆದರೆ ಕನ್ನಡ ಮಾತಾಡಬೇಕಾದವರು ಅದನ್ನು ಮರೆತು ಬರೀ ಇಂಗ್ಲೀಷ್ ಮೊರೆ ಹೊಕ್ಕರೆ ಮೇಲ್ನೋಟಕ್ಕೆ ತೀರಾ ಕ್ಷುಲ್ಲಕವೆನಿಸುವ, ಆದರೆ ಬದುಕಿನುದ್ದಕ್ಕೂ ಥರಥರವಾಗಿ ಕಾಡುವ ವಿಚಿತ್ರ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಇದು ಗಣೇಶನಂಥವರ ಸಮಸ್ಯೆಯಿಂದ ತಿಳಿಯುವ ಸತ್ಯ.

ಸರಿ, ನಾವು ಮತ್ತೆ ಗಣೇಶನ ಸಮಸ್ಯೆಗೆ ಹೋಗೋಣ. ತನ್ನ ಬದುಕಿನ ನಿರ್ಣಾಯಕ ಘಟ್ಟದಲ್ಲಿ ಕನ್ನಡ ಮಾಧ್ಯಮಕ್ಕೆ ಮರಳಿದ ಆತನನ್ನು ನಿಜಕ್ಕೂ ಮೆಚ್ಚಬೇಕು. ಆದರೆ ಅವನಿಗೆ ಮತ್ತೊಂದು ಘಟ್ಟದಲ್ಲಿ ಇಂಗ್ಲೀಷ್ ಕಣ್ಣೆದುರಿಗೆ ಬಂತಲ್ಲ!

ಕೌಟುಂಬಿಕ ಜವಾಬ್ದಾರಿ ಹೊತ್ತುಕೊಂಡಿದ್ದ ಇವನಿಗೆ ಈಗ ಇದ್ದ ದಾರಿ ಒಂದೇ. ಅದು ಇಂಗ್ಲೀಷ್ ಕಲಿಯೋದು. ಹಾಗೂ ಹೀಗೂ ಕಷ್ಟಪಟ್ಟು ಇಂಗ್ಲೀಷನ್ನು ಪ್ರೀತಿಸತೊಡಗಿದ ಗಣೇಶ ಇವತ್ತು ವೃತ್ತಿಯಲ್ಲಿ ಸೈ ಅನಿಸಿಕೊಂಡಿದ್ದಾನೆ. ಅವನು ಕೇವಲ ಕನ್ನಡಕ್ಕೆ ಅಂಟಿಕೊಂಡಿದ್ದರೆ ಅವನ ಗತಿ ಏನಾಗುತ್ತಿತ್ತು?

ಹಠಕ್ಕೆ ಬೇಕಾದರೆ 'ಅವನು ಈ ಕೆಲಸ ಬಿಟ್ಟುಹೋಗಿ ಜಮೀನು ಮಾಡಬಹುದಿತ್ತು....ಇದೇ ಕೆಲಸ ಯಾಕೆ ಬೇಕು?' ಅಂತೆಲ್ಲ ವಾದಿಸಬಹುದು. ಅಥವಾ ಪ್ರಾಯೋಗಿಕವಾಗಿ ಸಾಧ್ಯವಾಗದ ಅತಿರೇಕದ ಊಹೆಗಳನ್ನು ಮಾಡಬಹುದು. ಆದರೆ ಅವನಿಗೆ ಹೊಟ್ಟೆಪಾಡು ಮುಖ್ಯವಾಗಿತ್ತು ಎಂಬುದನ್ನು ಮರೆಯಬಾರದು.

ಅವನು ಸ್ವಲ್ಪ ಒಳ್ಳೆಯ ಕನ್ನಡ ಮತ್ತು ತುಸು ಇಂಗ್ಲಿಷ್ ಕಲಿತಿದ್ದರಿಂದ ಅವನಿಗೆ ಇವತ್ತು ತಿಂಗಳಿಗೆ 6 ಸಾವಿರ ರೂಪಾಯಿ ಸಂಬಳ ತಂದುಕೊಡುವ ಕೆಲಸ ಸಿಕ್ಕಿದೆ. ಆದರೆ ಕೇವಲ ಕನ್ನಡವನ್ನೇ ನೆಚ್ಚಿಕೊಂಡಿರುವ ಅವನ ಹಳ್ಳಿಗೆ ತನ್ನ ವಿದ್ಯಾವಂತ ಹುಡುಗರಿಗೆ ಒಂದು ಉದ್ಯೋಗ ಸೃಷ್ಟಿಸಬಲ್ಲ ಶಕ್ತಿ ಇಲ್ಲವಲ್ಲ! ಎಲ್ಲ ಹಳ್ಳಿಗಳ ಕತೆಯೂ ಇದೇ!!

'ಇದಕ್ಕೆಲ್ಲಾ ವ್ಯವಸ್ಥೆ ಕಾರಣ' ಎಂಬ ಉತ್ತರ ಗಣೇಶನಂಥವರನ್ನು ಸಮಾಧಾನ ಪಡಿಸಲಾರದು. ಯಾಕೆಂದರೆ ಕೇವಲ ಕನ್ನಡವನ್ನೇ ನಂಬಿಕೊಂಡಿರುವ ಅವನ ಗೆಳೆಯರೊಬ್ಬರು 15-20 ವರ್ಷಗಳ ವೃತ್ತಿ ಅನುಭವದ ನಂತರವೂ ಇನ್ನೂ ಬಡ್ತಿ ಕಾಣದೇ ಇದ್ದಲ್ಲೇ ಇರುವ ಜೀವಂತ ಉದಾಹರಣೆ ಅವನ ಕಣ್ಮುಂದಿದೆ. ಕನ್ನಡ ಇನ್ನೂ ಉದ್ಯೋಗ ಚೇತನವಾಗಿಲ್ಲ ಎಂಬುದನ್ನು ವಿವರಿಸಲು ಇದನ್ನು ಹೇಳಬೇಕಾಯಿತು.

ಹಾಗಾದರೆ ತಮಿಳರು ತಮ್ಮ ಭಾಷೆಯನ್ನು ಪ್ರೀತಿಸುತ್ತಲೇ ಬದುಕಿಲ್ಲವೇ? - ಈ ಪ್ರಶ್ನೆ ನಮಗೆ ಎದುರಾಗಬಹುದು.

ಈ ಪ್ರಶ್ನೆಯ ಬೆನ್ನಿಗೇ ಕೇವಲ ತಮಿಳು ಬಲ್ಲ ತಮಿಳರ ಆರ್ಥಿಕ ಸ್ಥಿತಿಗತಿಗಳಿಗೂ, ತಮಿಳು-ಇಂಗ್ಲೀಷ್ ಎರಡನ್ನೂ ಬಲ್ಲ ತಮಿಳರ ಸ್ಥಿತಿಗತಿಗಳೂ ನಡುವೆ ಇರುವ ಕಂದಕವನ್ನು ಕುರಿತು ಯೋಚಿಸಬೇಕು. ಇಂಥ ಸಂಕೀರ್ಣ ಸಮಸ್ಯೆಗಳು ಭಾಷಾಭಿಮಾನದ ವಿಚಾರಕ್ಕೆ ಬಂದಾಗ ಎದುರಾಗುತ್ತವೆ.

ಅಂದರೆ ಭಾಷಾಭಿಮಾನವೆನ್ನುವುದು ನಮ್ಮನ್ನು ಬಡವರಾಗಿಯೇ ಉಳಿಸಲು, ಉಜ್ವಲ ಅವಕಾಶಗಳನ್ನು ತಪ್ಪಿಸಿಕೊಳ್ಳಲು ಕಾರಣವಾಗಬಾರದು. ಆದರೆ ಕೇವಲ ಕನ್ನಡವನ್ನಷ್ಟೇ ಕಲಿತರೆ ಇಂಥ ಅಪಾಯವಿದೆ. ಹಾಗಾದರೆ ಇದಕ್ಕೇನು ಪರಿಹಾರ?

ಕನ್ನಡವನ್ನು ವಿವಿಧ ಮಗ್ಗುಲುಗಳಲ್ಲಿ ಬೆಳೆಸುವುದು - ಆರ್ಥಿಕವಾಗಿ, ಶೈಕ್ಷಣಿಕವಾಗಿ, ಉದ್ಯೋಗ ಚೇತನವಾಗಿ, ಆಡಳಿತ ಭಾಷೆಯಾಗಿ - ತೀರಾ ಮುಖ್ಯ. ಕನ್ನಡವನ್ನು ಹೀಗೆ ಬೆಳೆಸುವುದೇ ನಾವು ಕನ್ನಡಕ್ಕೆ ಹೊಸ ಜಗತ್ತಿನಲ್ಲಿ ಮಾಡಬಹುದಾದ ಅತ್ಯುತ್ತಮ ಸೇವೆ. ಅಲ್ಲಿಯವರೆಗೂ ನಾವು ಇಂಗ್ಲೀಷನ್ನು ಕಲಿಯಬೇಕಾದ್ದು ಅನಿವಾರ್ಯ.

**ಯಾಕೆ ಪ್ರೀತಿಸುವುದಿಲ್ಲ?**

ಕನ್ನಡ ಭಾಷೆ-ಸಂಸ್ಕೃತಿಗಳ ವಿಚಾರದಲ್ಲಿ ಯಾವುದೇ ನಿಶ್ಚಿತ ತೀರ್ಮಾನಕ್ಕೆ ತಲುಪುವುದು ತೀರಾ ಕಷ್ಟ. ಯಾಕೆಂದರೆ ನಮಗಿಲ್ಲಿ ಭಾಷಾಭಿಮಾನದ ಜತೆಜತೆಗೇ ಹತ್ತಾರು ಭಯಗಳು ಎದುರಾಗಿಬಿಡುತ್ತವೆ.

ವೈಯಕ್ತಿಕವಾಗಿ ಒಂದು ಪ್ರಬುದ್ಧ ತೀರ್ಮಾನಕ್ಕೆ ಬರುವುದು ಸರಿಯಾಗಿ ಯೋಚಿಸುವವನಿಗೆ ಸಾಧ್ಯ. ಆದರೆ ಇಡೀ ಕನ್ನಡಿಗರ ಬೃಹತ್ ಸಮೂಹ ಕನ್ನಡ ಬಳಕೆ, ಅಭಿಮಾನ, ಬೆಳವಣಿಗೆಗಳ ವಿಷಯದಲ್ಲಿ ಖಚಿತ ತೀರ್ಮಾನಕ್ಕೆ ಬರುವುದು ಅನುಮಾನ. ಕೆಲವು ಆಯಾಮಗಳಲ್ಲಿ ಸಮೃದ್ಧವಾಗಿರುವ ಕನ್ನಡ ಆಧುನಿಕ ಜಗತ್ತಿನಲ್ಲಿ ನಿರ್ಣಾಯಕವೆನಿಸುವಂಥ ಮತ್ತಷ್ಟು ಆಯಾಮಗಳಲ್ಲಿ ಇನ್ನೂ ಬೆಳೆಯದಿರುವುದು ಇದಕ್ಕೆ ಕಾರಣ.

ಆದರೂ ವಿದ್ಯುನ್ಮಾನ ಅಂಚೆ, ವೆಬ್‌ಸೈಟ್, ಡಾಟ್‌ಕಾಂ ಪತ್ರಿಕೋದ್ಯಮಗಳಲ್ಲಿ ಕನ್ನಡಕ್ಕೂ ಸ್ಥಾನ ಸಿಕ್ಕಿರುವುದನ್ನು ನೋಡಿದರೆ ಕನ್ನಡದ ಭವಿಷ್ಯಕ್ಕೇನೂ ಅಂಥ ಅಪಾಯ ಕಾಣುತ್ತಿಲ್ಲ. ಹೀಗೆಂದು ಸಮಾಧಾನ ಪಟ್ಟುಕೊಂಡು ಸುಮ್ಮನಾದರೆ ಮಾತ್ರ ಕಷ್ಟ. ನಮ್ಮ ಕನ್ನಡ ಉಜ್ವಲ ಬದುಕನ್ನು ಕಟ್ಟಿಕೊಡುವಂಥ ಕನ್ನಡವಾದರೆ ಯಾರು ತಾನೇ ಕನ್ನಡವನ್ನು ಪ್ರೀತಿಸುವುದಿಲ್ಲ?



# ಪುಸ್ತಕ ಪರಿಚಯ



**'ಗೊಂದಲಗಳ ನಾಡಿನಲ್ಲಿ'**

*ಡಾ|| ಎಂ. ಆರ್. ಮಂದಾರವಲ್ಲಿ*

ಶ್ರೀ ರಾಘವೇಂದ್ರ ಪ್ರಕಾಶನ
ಅಂಬಾಗ ಕೊಡ್ಲ, ಅಂಕೋಲಾ
ಪುಟ : ೪೪ ಪ್ರ.ಮು.: ೨೦೦೦
ಬೆಲೆ : ರೂ. ೫೦/-

**ಕ**ಳೆದ ಶತಮಾನದ ಅಂತ್ಯದ ಹೊತ್ತಿಗೆ ಕನ್ನಡದ ವೈಚಾರಿಕ ಸಾಹಿತ್ಯ ಸಂದರ್ಭ ನಿಜಕ್ಕೂ ಹೊರಳು ದಾರಿಯಲ್ಲಿ ತನ್ನೆಲ್ಲ ಶುಷ್ಕತೆಯೊಂದಿಗೆ ವಿಚಾರ ಪ್ರತಿಪಾದಿಸುತ್ತಿದ್ದರೆ. ಅಕಾಡೆಮಿಕ್ ಅಲ್ಲದ ವಿಚಾರವಂತಿಕೆ ನಂಬಿಕೆಗಳನ್ನು ತರ್ಕಗಳಲ್ಲಿ ನಿಕಷಗೊಳಿಸುವ ಪರಿಯೊಂದು ಗೌರೀಶ ಕಾಯ್ಕಿಣಿ, ಶಿವರಾಮ ಕಾರಂತ, ಎ. ಎನ್. ಮೂರ್ತಿರಾಯರ ಬರಹಗಳಲ್ಲಿ ಕಾಣಿಸಿಕೊಂಡಿತ್ತು. ಅದಾದನಂತರ ನಮ್ಮ ವೈಚಾರಿಕ ಸಾಹಿತ್ಯ ಕ್ರಮಿಸಿದ ಅರ್ಧಶತಮಾನದ ದಾರಿಯಲ್ಲಿ ಪ್ರಭುತ್ವ, ರಾಷ್ಟ್ರೀಯತೆಗಳಂತಹ ಆಧುನಿಕ ಚಿಂತನೆಯ ಜೊತೆಗೇ ಪ್ರತಿಸಂಸ್ಕೃತಿಗಳ, ವಿಸ್ಮೃತಿಗಳ ಒಂದು ಸುದೀರ್ಘ ಚಿಂತನಾಕ್ರಮಗಳನ್ನು ಮೈ ಪಡೆದುಕೊಂಡಿದೆ. ಆಪ್ತವಾಗುವ ಧಾಟಿಯಲ್ಲಿ ಹರಟೆಯ ಸುಭಗ, ಪ್ರಬಂಧದ ಲಾಲಿತ್ಯವನ್ನು ತನ್ನದಾಗಿಸಿಕೊಂಡ ವಿಚಾರಸಾಹಿತ್ಯ, ಸಂಸ್ಕೃತಿಯ ಅಧ್ಯಯನ ಮತ್ತು ವೈಚಾರಿಕ ದೃಷ್ಟಿಕೋನಗಳು ಸೃಜಿಸಿದ ಗೊಂದಲಗಳ ನಡುವೆ ಬಂದು ನಿಂತಿದೆ. ಈ ಹಿನ್ನೆಲೆಯಲ್ಲಿ ಡಾ|| ಎಂ. ಆರ್. ಮಂದಾರವಲ್ಲಿಯವರ 'ಗೊಂದಲಗಳ ನಾಡಿನಲ್ಲಿ' ಗಮನಾರ್ಹ ಮತ್ತು ಪ್ರಸ್ತುತ.

ಈ ಪುಸ್ತಕದ ಲೇಖನಗಳಿಗೆ ಬಂದರೆ, ಲೇಖಕಿ ಶೀರ್ಷಿಕೆಯ ಲೇಖನದಲ್ಲಿ ತಮ್ಮ ಚಿಂತನಾಕ್ರಮಕ್ಕೆ ವಿಸ್ತಾರವಾದ ಪ್ರಸ್ತಾವನೆಯನ್ನು ಮಂಡಿಸಿದಂತೆ ಕಾಣುತ್ತದೆ. ಆಧುನಿಕ ಜೀವನಕ್ರಮ ಒಳಗೊಂಡ ಎಲ್ಲ ಸೂಕ್ಷ್ಮ ತಲ್ಲಣ ಮತ್ತು ಭಾರತದ ಸಂಸ್ಕೃತಿಯ ಬೇರಲ್ಲಿ ಹರಿದುಬಂದ ಜಾತಿ-ಸಂಪ್ರದಾಯಗಳ ಘನೀಕೃತ ಮಾನವನ ಚಿಂತನಾ ಕ್ರಮದಂತೆ ಗೊಂದಲಗೊಳಿಸುವ ಸಂಗತಿಗಳ ಪಟ್ಟಿಯೊಂದು ಲೇಖನದಲ್ಲಿ



ಸಿದ್ಧವಾಗುತ್ತದೆ. ಕೋಟಿ ವರುಷಗಳ ಭಾರತ ಚರಿತ್ರೆಯೊಂದಿಗೆ 'ಪುರುಷಸೂಕ್ತ'ದ ಪ್ರತಿಮಾತ್ಮಕ ಸೃಷ್ಟಿಕ್ರಿಯೆಯ ವಿಶ್ಲೇಷಣೆ ಮಾಡುತ್ತಾ ಲೇಖಕಿ ಸೃಷ್ಟಿ ಹೆಣ್ಣಿಂದ ಅಲ್ಲವೇ ಎಂದು ತಮ್ಮಷ್ಟಕ್ಕೇ ತಬ್ಬಿಬ್ಬಾಗುತ್ತಾರೆ. ಮಾನವಶಾಸ್ತ್ರ ಅಭ್ಯಸಿಸುವ ಜನಾಂಗಗಳ ಸಂಪ್ರದಾಯ, ಹಬ್ಬ-ಹರಿದಿನಗಳನ್ನ ತರ್ಕದಲ್ಲಿ ಒಡಂಬಡಿಸಿಕೊಂಡು ನಂಬಲಾಗದ, ಅನುಸರಿಸಲಾಗದ ಆಧುನಿಕ ಪ್ರಜ್ಞೆಯ ಎಲ್ಲ ಗೊಂದಲಗಳಿಗೂ ತಾಕುವತ್ತ, ತಡವಿ ಅದಕ್ಕೊಂದು ಸಮಾಧಾನಕರ ಉತ್ತರ ಪಡೆಯುವತ್ತ ಲೇಖಕಿ ಪ್ರಯತ್ನಿಸುತ್ತ ಕೊನೆಗೆ ದೈವತ್ವದ, ಅದರ ನಂಬುಗೆಯ ಕ್ಲೀಷೆಯಲ್ಲಿ ಸಿಲುಕುತ್ತಾರೆ.

ಸಹಜವಾಗಿ ತಮ್ಮ ಚಿಂತನೆಯನ್ನು ಅಕಡೆಮಿಕ್ ರೂಢಿಯಲ್ಲದ ತಮ್ಮ ಅಭಿಜಾತ ಶೈಲಿಯಲ್ಲಿ ಬರೆಯತೊಡಗುವ ಲೇಖಕಿ ಏಕಾಏಕಿ ಸೂಕ್ಷ್ಮ ಒಳನೋಟಗಳನ್ನ ವಿಶಿಷ್ಟ ಅಂತಃಸತ್ವದ ಸೊಗಸನ್ನ ಹಲವು ಬಾರಿ ನೀಡಿ ರೋಮಾಂಚನಗೊಳಿಸುತ್ತಾರೆ. ಸತ್ಯವಾದ ಸಂಗತಿಗಳಿಗೆ ಲೇಖಕಿ ತಟ್ಟನೇ ಪೂರ್ವನಿರ್ಧರಿತ ತಮ್ಮ ಹೇಳಿಕೆಗಳನ್ನು ಘೋಷಣೆಯಾಗಿಸುವ ಪ್ರಯತ್ನವೂ ಅವರೆಲ್ಲ ಲೇಖನಗಳಲ್ಲಿ ಢಾಳಾಗಿ ಕಂಡುಬರುತ್ತದೆ.

ಆಧುನಿಕ ಸಾಮಾಜಿಕ ಸಾಂಸಾರಿಕ ಜೀವನಗಳ ಸಮರ್ಥ ಚಿಂತನೆಯಾಗಿ ಅವರ 'ಇದೆ ಮತ್ತು ಇಲ್ಲದರ ನಡುವೆ' ಸಂಬಂಧ 'ಋಣ-ಋಣಿ' 'ತೀರ್ಮಾನವೆಂಬ ಆತ್ಮ ವ್ಯವಹಾರ' ಲೇಖನಗಳು ಗಮನಾರ್ಹವೆನಿಸುತ್ತವೆ. ಧರ್ಮದ ಆಚರಣೆ ಮತ್ತು ಸಾವಿನ ನಂತರದ ಗದ್ದಲದ ಕುರಿತು ಲೇಖನಗಳು ಕಾಳಜಿಯಿದ್ದೂ ಸರಳ ತೀರ್ಮಾನಗಳಿಂದಾಗಿ ಸೊರಗಿದಂತೆ ಭಾಸವಾಗುತ್ತವೆ. ವಾಗ್ವಾದಕ್ಕೆಳಸುವ ಅವರ 'ಕರ್ಣನಿಗೆ ಕ್ಷ ಕಿರಣ' 'ಶೂದ್ರ ಎಂಬ ದೇವರು' ಮೊದಲಾದ ಲೇಖನಗಳು ತಮ್ಮ ಮಿತಿಯಲ್ಲಿ ಹೊಸ ಅಭಿಪ್ರಾಯಗಳನ್ನು ಮಂಡಿಸುವ ಪ್ರಯತ್ನಗಳಾಗಿವೆ. ಒಂದು ಯುಗದ ಮೌಲ್ಯಗಳಾಗಿ, ಒಂದು ಕಥಾನಕದಲ್ಲಿ ಪ್ರಸ್ತುತವಾಗುವ ಪಾತ್ರಗಳನ್ನು ಪ್ರತಿಮೆಯಾಗಿ ಉದಾಹರಣೆಯಾಗಿ ಬಳಸುವ ಮುನ್ನ ಆ ಪಾತ್ರವನ್ನ ಸಂದರ್ಭದಿಂದ ಪ್ರತ್ಯೇಕಿಸುವ ಪರಿಯನ್ನು ಪ್ರಶ್ನಿಸಬೇಕಾದ ತುರ್ತು ಈ ಲೇಖನಗಳಲ್ಲಿದೆ. ಕರ್ಣ, ರಾಮ, ಕುಂತಿ, ರಾವಣ, ಹನುಮಂತ, ಯಯಾತಿ - ಹೀಗೆ ಪೌರಾಣಿಕ ಕಲ್ಪನೆಯ ಪಾತ್ರಗಳು ನಿರ್ವಹಿಸುವ ಮೌಲ್ಯಗಳ, ವರ್ತನೆಗಳ ಭೂಮಿಕೆಯನ್ನು ಪ್ರತ್ಯೇಕಿಸಿ ಆಧುನಿಕ ಜಗತ್ತಿನ ವಿದ್ಯಮಾನಗಳಿಗೆ ಸಂವಾದಿಯಾಗಿಸುವ ಸಂದರ್ಭದಲ್ಲಿ ವಿಗ್ರಹ ಭಂಜಕತನವಿಲ್ಲದಂತೆ ಎಚ್ಚರವಹಿಸುವ ತುರ್ತು ನಮ್ಮೆಲ್ಲರದು. ಈ ಹಿನ್ನೆಲೆಯಲ್ಲಿ ಕರ್ಣನಿಗೆ ಕ್ಷ ಕಿರಣ ಬಿಡುವ, ತಮ್ಮ ಲೇಖನಗಳುದ್ದಕ್ಕೂ ಈ ರೀತಿಯ ಪಾತ್ರಗಳನ್ನ ಪೂರಕವಾಗಿ ಬಳಸಲು ಹೊರಡುವ ಲೇಖಕಿಗೆ ಅದೊಂದು ಸಾಧನೆಯೂ ಹೌದು, ತೊಡಕೂ ಹೌದು. 'ರಾಮ' ಕೇವಲ ಪುರುಷೋತ್ತಮನಲ್ಲದೆ ವಿವಾದಿತ ಅಯೋಧ್ಯೆಯ ಗುಡಿಯಲ್ಲಿ ಪ್ರತಿಷ್ಠಾಪಿತ ಮೂರ್ತಿಯಾಗಿರುವ ಈ ಸಂದರ್ಭದಲ್ಲಿ 'ರಾಮ'ನನ್ನ ಪ್ರತಿಮೆಯಾಗಿಸುವಲ್ಲಿ ಇರಬೇಕಾದ ಎಚ್ಚರ ವೇದ್ಯವಾದುದು.

ಈ ಪುಸ್ತಕದ ಮುಖ್ಯ ಲೇಖನಗಳಲ್ಲಿ ಒಂದಾದ "ಭಾರತೀಯ ವಿಜ್ಞಾನದ ರಾಮಕೃಷ್ಣರ ಹಾದಿ" ತನ್ನುದ್ದಕ್ಕೂ ಜಿ. ರಾಮಕೃಷ್ಣರವರ ಪುಸ್ತಕದ ಪ್ರತಿ ಅಧ್ಯಾಯಗಳಿಗೆ, ಪ್ರತಿ ಹೇಳಿಕೆಗಳಿಗೆ ಮಾರುತ್ತರ ನೀಡುವಲ್ಲಿ ನಿರತವಾಗಿದೆ. ಪುಷ್ಪಕ ವಿಮಾನದ ಕಲ್ಪನೆಯ ಮಾತ್ರಕ್ಕೆ ವಿಮಾನ ಬಳಕೆ ಇತ್ತು ಎಂಬುದು ಹಾಸ್ಯಾಸ್ಪದ ಎಂಬಂತಹ ಸರಳ ತರ್ಕ ಜಿಜ್ಞಾಸೆಗಳಿಂದ ತಮ್ಮ ಎಡಪಂಥೀಯ ವೈಜ್ಞಾನಿಕ ನಿಲುವುಗಳಿಂದ

ಪ್ರಶ್ನಿಸುತ್ತ ಹೋಗುವ ಜಿ. ರಾಮಕೃಷ್ಣರ ಪುಸ್ತಕಕ್ಕೆ ಪ್ರತ್ಯುತ್ತರ ನೀಡುವ ಸಂದರ್ಭದಲ್ಲಿ ಲೇಖಕಿ ಇನ್ನಷ್ಟು ಸಂಯಮ ತೋರುವ ಅಗತ್ಯವಿದೆ. ಭಾರತೀಯ ಚಿಂತನೆ, ವಿಜ್ಞಾನವೆಂದರೆ ವೈದಿಕ ಚಿಂತನೆಯೊಂದೇ ಎಂಬಂತಹ ಸರಳ ತೀರ್ಮಾನಗಳೂ ಈ ಸಂದರ್ಭದಲ್ಲಿ ಪ್ರಶ್ನಾರ್ಹ. ಲೇಖಕಿ ವಕಾಲತ್ತು ವಹಿಸುವ ಮೈತ್ರೇಯ, ಉದ್ದಾಲಕ, ಶೌನಕ ಮೊದಲಾದವರು ಭಾರತೀಯ ವೈದಿಕೇತರ ಚಿಂತನಾಕ್ರಮಕ್ಕೆ ಎಷ್ಟು ಪ್ರಸ್ತುತರು ಎಂಬುದಕ್ಕೆ ಯಾವುದೇ ಸಮರ್ಥನೆಯನ್ನು ಲೇಖಕಿ ನೀಡಹೋಗುವುದಿಲ್ಲ. ಬದಲಾಗಿ ಪೌರಾಣಿಕ ಹಿನ್ನೆಲೆಯನ್ನ ಪ್ರಸ್ತುತಗೊಳಿಸಿಕೊಂಡು ರಾಮಕೃಷ್ಣರ ಪ್ರತಿ ಹೇಳಿಕೆಗಳಿಗೆ (ಪುಟ ಸಂಖ್ಯೆಯನ್ನು ದಾಖಲಿಸುತ್ತಾ) ಸಂವಾದಿಸುವ ಸಲುವಾಗಿ ಎಸ್.ಆರ್. ರಾವ್, ರಾಮಚಂದ್ರನ್ ಮೊದಲಾದ ಹೆಸರುಗಳಿಗೆ ಮೊರೆ ಹೋಗಿದ್ದಾರೆ.

ಒಟ್ಟಾರೆ ಓದಿಸಿಕೊಳ್ಳುವ, ಚಿಂತಿಸಲು ಹಚ್ಚುವ, ಪ್ರಚೋದನೀಯ ಹಾಗೇ ಸರಳವಾಗಿ ಸಂವಹನಗೊಳ್ಳುವ ವಿಚಾರಗಳಿಂದ 'ಗೊಂದಲಗಳ ನಾಡಿನಲ್ಲಿ' ಪ್ರಸ್ತುತ ಹಾಗೂ ಗಮನಾರ್ಹವೆಂದೇ ಹೇಳಬೇಕು.

*- ಆನಂದ್ ಋಗ್ವೇದಿ*



## ಸಮಗ್ರ ವ್ಯಕ್ತಿಚಿತ್ರಗಳು

ಲೇ: ಹರಿಹರಪ್ರಿಯ, ಪ್ರ.ಮು. : 1998, ಪುಟಗಳು : xxiv +276
ಬೆಲೆ : ರೂ. 200/-

ಕನ್ನಡದಲ್ಲಿ ನವ್ಯ ಹಾಗೂ ನವ್ಯೋತ್ತರ ಸಾಹಿತ್ಯ ಚಳುವಳಿಗಳ ಹಾನಿಗಳನ್ನ ಗಮನಿಸ ಹೊರಟಾಗ ಅನೇಕ ಬರಹದ ಪ್ರಕಾರಗಳೇ ಇಲ್ಲವಾಗಿ ಹೋದವು ಅಥವಾ ಕ್ಷೀಣಿಸಿದವು ವ್ಯಕ್ತಿಚಿತ್ರಗಳು, ಲಲಿತ ಪ್ರಬಂಧಗಳು, ಮಕ್ಕಳ ಸಾಹಿತ್ಯ ಮುಂತಾದವು ಇಲ್ಲಿ ಗಮನಿಸಬಹುದು. ಹರಿಹರಪ್ರಿಯರು ಸುಮಾರು 30 ವರ್ಷಗಳಷ್ಟು ಸುದೀರ್ಘ ಅವಧಿಯಲ್ಲಿ ಬರೆದಿರುವ ಈ ವ್ಯಕ್ತಿಚಿತ್ರಗಳು ವರ್ಣಮಯವಾಗಿಯೂ ವೈವಿಧ್ಯಮಯವಾಗಿಯೂ ಇದೆ. ಡಿ.ವಿ.ಜಿ., ವಿ.ಸೀ., ಕಾರಂತ ಮುಂತಾದ ಹಿರಿಯ ತಲೆಮಾರಿನವರು ತಮ್ಮ ಜೀವನ ಪ್ರೀತಿ ಹಾಗೂ ತಾವು ಕಂಡ ಅನುಭವಿಸಿದ ವ್ಯಕ್ತಿಗಳ ಬಗೆಗಿನ ಪ್ರೀತಿಯಿಂದ ಸಮಗ್ರ ವ್ಯಕ್ತಿಚಿತ್ರಗಳನ್ನು ರೂಪಿಸಿದರು. ಪ್ರಾಯಶಃ ನಂತರದ ತಲೆಮಾರಿನ ನವ್ಯ ಲೇಖಕರಿಗೆ ತಮ್ಮ ಹಾಗೂ ತಮ್ಮ ಹಿಂದಿನ ತಲೆಮಾರಿನ ಲೇಖಕರ ಸಾಂಸ್ಕೃತಿಕ ವ್ಯಕ್ತಿಗಳ ಬಗ್ಗೆ ಒಂದು ಸಹನಶೀಲ ಆರ್ದ್ರತೆ ಕಾಣಬರಲಿಲ್ಲ.

ಹರಿಹರಪ್ರಿಯರು ತಮ್ಮ ಅಕೆಡೆಮಿಕ್ ಸಾಹಿತಿಗಳ ವಿರುದ್ಧ ಹೂಡಿದ ನಿರಂತರ ಸಮರದ ಮೂಲಕ ತಮ್ಮ ಗಟ್ಟಿದನಿಯ ವಿಚಾರ ಪ್ರತಿಪಾದನೆಯ ಮೂಲಕ ಸಾಹಿತ್ಯವಲಯದಲ್ಲಿ ಪ್ರಸಿದ್ಧರು. ಈ ಪುಸ್ತಕ ಸಾಂಸ್ಕೃತಿಕವಾಗಿ ಬಹುಮುಖ್ಯವಾದದ್ದು. ಹೀಗೆ ಹೇಳಲು ಕಾರಣ ಹರಿಹರಪ್ರಿಯರ ಚಿತ್ರಣದ ವ್ಯಾಪ್ತಿ

ಹಾಗೂ ವೈವಿಧ್ಯಗಳು. ಐದು ಭಾಗಗಳ ಈ ಪುಸ್ತಕದಲ್ಲಿ ಮೊದಲ ಭಾಗ ಬಸವಣ್ಣ, ಕನಕದಾಸ, ಗಾಂಧಿ ಮುಂತಾದವರಿಂದ ಆರಂಭಿಸಿ 32 ಜನ ಪ್ರಸಿದ್ಧರಾದ ಹಾಗೆಯೇ ಪ್ರಸಿದ್ಧರಾಗದೇ ತೆರೆಯುಮರೆಯಲ್ಲೇ ಉಳಿದ ಲೇಖಕರುಗಳ ಬಗ್ಗೆ ಅಪೂರ್ವವಾದ ವ್ಯಕ್ತಿಚಿತ್ರಣವಿದೆ, ಸಿದ್ಧವನಹಳ್ಳಿ ಕೃಷ್ಣಶರ್ಮ, ಬೆಂಗಳೂರು ಪುಟ್ಟಯ್ಯ, ಎತ್ತೂರು ಶಾಂತರಾಜ ಶಾಸ್ತ್ರಿ, ಬಿ. ಪುಟ್ಟಸ್ವಾಮಯ್ಯ, ಬಿ. ಎಸ್. ಪಾಂಡುರಂಗರಾವ್ ಮುಂತಾದ ಮರೆತುಹೋದ ಹಿರಿಯರ ಚಿತ್ರಣ ನಮ್ಮ ಕುತೂಹಲಕ್ಕೆ ಕಾರಣವಾಗುತ್ತದೆ. ಎರಡನೆಯ ಭಾಗದಲ್ಲಿ ಶಾಂತಾದೇವಿ ಕಣವಿ ಅನುಪಮಾ ನಿರಂಜನರಂಥಾ ಮಹಿಳಾ ಲೇಖಕಿಯರನ್ನ ಒಳಗೊಂಡು ಗಮಕಿ ಶಕುಂತಲಾಬಾಯಿ, ಹರಿಕಥೆ ಮಾಡುತ್ತಿದ್ದ ಪುತ್ತೂರಿನ ಪದ್ಮಾವತೀಬಾಯಿ, ಚಿತ್ರನಟಿ ಜಯಮಾಲ ಇವರ ಬಗ್ಗೆ ಬರೆದ ಹರಿಹರಪ್ರಿಯ ಚಿತ್ರಾ ಕೃಷ್ಣಮೂರ್ತಿ ಎಂಬ ಉತ್ತಮ ಶಿಕ್ಷಕಿ ಬಗ್ಗೆ ಉತ್ಸುಕತೆಯಿಂದ ಬರೆದಿದ್ದಾರೆ. ಮೂರು ಮತ್ತು ನಾಲ್ಕನೇ ಭಾಗಗಳಲ್ಲಿ ರಾಳ್ಳಪಲ್ಲಿ ಅನಂತಕೃಷ್ಣಶರ್ಮ, ಪಂಡಿತ ಪುಟ್ಟರಾಜ ಗವಾಯಿ ಮೊದಲಾದ ಸಂಗೀತಗಾರರ ಬಗ್ಗೆ ಬರೆದ ಹಾಗೇ ರೆಕಾರ್ಡ್ ರಂಗರಾವ್ ಅವರ ಅಪಾರ ಆಸಕ್ತಿ ಶ್ರದ್ಧೆಗಳ ಪರಿಶ್ರಮದ ಫಲವಾದ ಧ್ವನಿ ಮುದ್ರಿಕೆಗಳ ಸಂಗ್ರಹದ ಬಗ್ಗೆಯೂ ಇಲ್ಲಿ ವಿವರಗಳಿವೆ.

ಅ. ನ. ಸುಬ್ಬರಾವ್, ಕೆ. ಕೆ. ಹೆಬ್ಬಾರ್, ರುಮಾಲೆ ಚನ್ನಬಸವಯ್ಯ, ಪಿ. ಆರ್. ತಿಪ್ಪೇಸ್ವಾಮಿ ಮೊದಲಾದ ಐದು ಜನ ಕಲಾವಿದರ ಬಗ್ಗೆಯೂ ಇಲ್ಲಿ ಆತ್ಮೀಯ ಚಿತ್ರಣ ಕಾಣಬರುತ್ತದೆ.

ಅದಕ್ಕಿಂತಲೂ ಚಿಂತಾಮಣಿಯಲ್ಲಿ ಸಾಹಿತ್ಯದ ಕಾರ್ಯಕ್ರಮವನ್ನ ಒಂದು ವ್ರತವೆಂಬಂತೆ ಹಲವಾರು ವರ್ಷಗಳ ಕಾಲ ಸಾವಿರಾರು ಕಾರ್ಯಕ್ರಮ ನಡೆಸಿದ ಸಾಹಿತ್ಯ ಕೂಟದ ಗುಂಡಪ್ಪನವರ ಬಗ್ಗೆ, ಬೊನ್ಸಾಯಿ ಶ್ರೀನಿವಾಸ್ ಬಗ್ಗೆಯೂ ಇಂಜಿನಿಯರ್ ಶಿವಣ್ಣ ಮೊದಲಾದ ವಿರಳ ಚಿತ್ರಣಗಳು ಈ ಪುಸ್ತಕದ ಹೆಗ್ಗಳಿಕೆ.

ಹರಿಹರಪ್ರಿಯರ ಈ ವ್ಯಕ್ತಿ ಚಿತ್ರಣಗಳ ಮೂಲ ಆಕರ ಅವರ ಓದು, ಹಾಗೂ ಸಂಶೋಧಕ ಮನಸ್ಸು ಮತ್ತು ಲೇಖಕರ ಜೊತೆಗಿನ ಬಹುಕಾಲದ ಒಡನಾಟದ ಫಲವಾಗಿ ರೂಪುಗೊಂಡಿದೆ. ಮೊನಚಾದ ಭಾಷೆ ಅಲ್ಲಲ್ಲಿ ಸ್ವಲ್ಪ ವ್ಯಂಗ್ಯ ಮತ್ತು ತಿವಿತಗಳನ್ನ ತಮ್ಮ ಎಂದಿನ ಶೈಲಿಯಲ್ಲಿ ನಿರೂಪಿಸಿದ್ದಾರೆ. ಆದರೆ ಈ ಎಲ್ಲ ಬರಹಗಳ ಹಿಂದೆ ಮುಖ್ಯವಾಹಿನಿ ಮರೆತುಹೋದವರ ಬಗ್ಗೆ ಅವರ ಕಳಕಳಿ ಶ್ರದ್ಧೆ ಎದ್ದುಕಾಣುತ್ತದೆ. ಅವರು ಉದ್ದಕ್ಕೂ ಪ್ರತಿಪಾದಿಸಿಕೊಂಡು ಬಂದಿರುವ ಅಕೆಡೆಮಿಕ್ ಪಟ್ಟಭದ್ರರ ಬಗ್ಗೆ ಇರುವ ಸಿಟ್ಟು ಮತ್ತು ಪ್ರತಿಭಟನೆಗಳು ಕಾಣುಬರುತ್ತವೆ. ಸುಂದರವಾಗಿ ಅಚ್ಚುಕಟ್ಟಾಗಿ ಇರುವ ಈ ಪುಸ್ತಕಕ್ಕೆ ಇರಬೇಕಿದ್ದ ಇನ್ನೆರಡು ಸಂಗತಿಗಳೆಂದರೆ; ಆಯಾ ವ್ಯಕ್ತಿಚಿತ್ರಗಳ ಜೊತೆಗೆ ರೇಖಾ ಚಿತ್ರ ಅಥವಾ ಆಯಾ ವ್ಯಕ್ತಿಗಳ ಫೋಟೋಗಳು, ಮತ್ತು ಈ ಲೇಖನಗಳನ್ನು ಬರೆದ ವರ್ಷಗಳು ನಮೂದಿಸಬೇಕಿತ್ತು, ಅದರಲ್ಲೂ ಹೊಸ ತಲೆಮಾರಿನ ಓದುಗರ ಅನುಕೂಲಕ್ಕೆ ಇದು ಬೇಕಿತ್ತು.

## ಶಮಾ (ಕವನ ಸಂಕಲನ)

ಲೇ : ಶ್ರೀ ಶ್ರೀ ಪಿಸ್ಸೆ, ಪ್ರ.ಮು. : 1999, ಪು : 80
ಬೆಲೆ: ರೂ. 35/-, ಸಿ.ವಿ.ಜಿ. ಪ್ರಕಾಶನ, ಬೆಂಗಳೂರು

ಇದು ಶ್ರೀಧರ ಪಿಸ್ಸೆ ಅವರ ಮೂರನೇ ಕವನ ಸಂಕಲನ 'ಗಿಣ್ಣು', 'ಬೆಳಗೆದ್ದು ನಿಂತರೆ' ಸಂಕಲನಗಳ ನಂತರ ಸುದೀರ್ಘ ಕಾಲದ ಮೌನವನ್ನ ಪಿಸ್ಸೆ ತಮ್ಮ 'ಶಮೆ'ಯ ಮೂಲಕ ಮುರಿದಿದ್ದಾರೆ. 1986 ರಿಂದ 99ರ ವರೆಗೂ ಬರೆದಿರುವ ನಲವತ್ತನಾಲ್ಕು ಕವಿತೆಗಳು 'ಶಮಾ'ದ ಜೀವ ತುಂಬಿವೆ. ಬಹು ಮುಖ್ಯವಾಗಿ ಲಯಬದ್ಧ ಕೋಮಲ ಭಾವನೆಗಳ ಕವಿತೆಗಳನ್ನು ಕಟ್ಟಿರುವ ಪಿಸ್ಸೆಯವರದ್ದು ವೈವಿಧ್ಯಮಯ ವಸ್ತು-ನಿರೂಪಣೆಗಳ ಭಾಷೆ ಇದೆ. ಬೇಂದ್ರೆ ಮಧುರಚೆನ್ನ ಶಿವಪ್ರಕಾಶ್ ಮುಂತಾದವರ ಪ್ರಭಾವಕ್ಕೆ ಒಳಗಾದಂತೆ ತೋರುವ ಇವರ ಅನುಭಾವದ ತುಡಿತ, ಸರಳ ಭಾಷೆಯಲ್ಲಿ ನಡೆಯುವ ಕಾವ್ಯಾತ್ಮಕ ಸಂವಾದಗಳು ಈ ಕವನಗಳ ಮುಖ್ಯ ನೆಲೆ. ಇದರ ಜೊತೆಗೆ ಆರ್ದ್ರತೆ ತುಂಬಿ ತಾಯಿ ಭೂಮಿ ಹೆಣ್ಣುಗಳ ಸೆಳೆತವನ್ನು ನಿಸರ್ಗಕ್ಕೆ ದೈವತ್ವಕ್ಕೆ ಅವುಗಳನ್ನ ಏರಿಸುತ್ತದೆ; 'ಕೈಲಾಸದ ಒಂದು ಸೀನು, ಯವ್ವೊ' ಮುಂತಾದ ಕವಿತೆಗಳು ಈ ಮಾತಿಗೆ ಉದಾಹರಣೆಯಾಗಿವೆ. ತಮ್ಮ ಎಲ್ಲ ಸಿಟ್ಟು ಸೆಡವು ಹತಾಶೆ ಮತ್ತು ದಿಗ್ಭ್ರಮೆಗಳಿಗೆ ಕಾವ್ಯ ರಚನೆಯಲ್ಲಿ ಉತ್ತರ ಹುಡುಕ ಹೊರಡುವ ಪಿಸ್ಸೆಯವರ ಕವಿತೆಗಳು ಎಷ್ಟೋಸಲ ಸರಳ ರಚನೆಗಳಾಗಿ ಹೇಳಿಕೆಗಳ ರೂಪದಲ್ಲೂ ನಿಂತುಬಿಡುತ್ತದೆ. ಅದಕ್ಕೆ 'ಅಲ್ಲ ನಾನಲ್ಲ', 'ಸಾಕಾ ಬೇಕಾ' 'ಇಲ್ಲಿ' ಮುಂತಾದವು ಸಾಮಾಜಿಕ ಕಳಕಳಿ ಹೊತ್ತುಕೊಂಡು ಕಾವ್ಯಾತ್ಮಕವಾಗಿ ಯಶಸ್ವಿಯಲ್ಲದ ರಚನೆಗಳು ಕಾಣಬರುತ್ತವೆ. ಆದರೆ ಇವರ ಚುರುಕಾದ ಭಾಷೆ ಕಾವ್ಯ ರಚನೆಯ ಬಗ್ಗೆ ಇರುವ ಶ್ರದ್ಧೆ ಇವು ಪಿಸ್ಸೆಯವರ ಕಾವ್ಯವನ್ನ ನಾವುಗಳು ಆಸೆಗಣ್ಣಿಂದ ನೋಡುವಂತೆ ಮಾಡುತ್ತವೆ. ಕೆಲವು ಕವಿತೆಗಳ ವ್ಯಂಗ್ಯ ಮತ್ತು ಜಗ್ಗನೆ ಬೆಳಗುವ ಸ್ಫೋಟಕ ಗುಣ ಹೆಚ್ಚು ಕಾಲ ಮನಸ್ಸಿನಲ್ಲಿ ಕಾಡುವಂಥಾದ್ದಾಗಿದೆ. ಪ್ರತಿಮೆಗಳ ದೃಷ್ಟಿಯಿಂದ ಭಾಷೆಯ ದೃಷ್ಟಿಯಿಂದ ತಾನೇ ತುಳಿದ ಹಾದಿಯನ್ನು ಮುರಿಯಬೇಕಾದ ಸಾಹಸವನ್ನು ಪಿಸ್ಸೆಯವರಿಂದ ನಿರೀಕ್ಷಿಸಬಹುದೆಂಬಂತೆ ತೋರುತ್ತದೆ.

## ಯಾರ ಜಪ್ತಿಗೂ ಸಿಗದ ನವಿಲುಗಳು

ಸಂ: ಪಿ. ಚಂದ್ರಿಕಾ
ಪ್ರ: ಅಭಿನವ, ಬೆಂಗಳೂರು

ದೇವನೂರು ಮಹಾದೇವರ ಬಗ್ಗೆ ಅವರ ವ್ಯಕ್ತಿತ್ವ ಸಾಹಿತ್ಯ ಇವುಗಳನ್ನೆಲ್ಲಾ ಒಳಗೊಂಡ ಪುಸ್ತಕವೊಂದನ್ನು ಅಭಿನವದ ಗೆಳೆಯರು ಶ್ರಮವಹಿಸಿ ರೂಪಿಸಿದ್ದಾರೆ. ನಮ್ಮಲ್ಲಿ ಕೆಲವು 'ಹೆಸರಾಂತ' ಬರಹಗಾರರನ್ನ ಬಿಟ್ಟರೆ ಉಳಿದ ಅನೇಕ ಬರಹಗಾರರ ಬಗೆಗಿನ ಚರ್ಚೆ ಮತ್ತು ವಿಮರ್ಶೆಗಳು ಬಲು ಅಲ್ಪಪ್ರಮಾಣದಲ್ಲಿ ನಡೆದಿದೆ. ಇದನ್ನ ಒಂದು ದೃಷ್ಟಿಯಿಂದ ವಿಮರ್ಶಾಲೋಕದ ಅಥವಾ ಸಾಹಿತ್ಯ ಜಗತ್ತಿನ ಅಸಡ್ಡೆ ಅಂತ ಆರೋಪಿಸಿದರೂ, ಮತ್ತೊಂದು ನಿಟ್ಟಿನಿಂದ ಹೊಸ ಪೀಳಿಗೆಯ

ನಮಗೆ ಅವಕಾಶ ಅಂತಲೂ ಗುರುತಿಸಬಹುದು. ಸುಮಾರು ಇನ್ನೂರು ಪುಟಗಳ ಗಾತ್ರದ (ದೇವನೂರರ ಸಮಗ್ರ ಕೃತಿಗಳು ಇಷ್ಟೇ ಇರಬಹುದು) ಈ ಪುಸ್ತಕ ದೇವನೂರರ ಸಾಹಿತ್ಯದ ಅನೇಕ ಮುಖಗಳನ್ನು ಕುರಿತು ಚರ್ಚಿಸುತ್ತದೆ. ಕನ್ನಡ ಸಾಹಿತ್ಯ ದೇವನೂರರ ಎಲ್ಲ ಕೃತಿಗಳ ಮೇಲೂ ನಡೆಸಿದ ವಿಮರ್ಶೆ ಚರ್ಚೆ ಜಗಳಗಳು ಇಲ್ಲಿ ದಾಖಲಾಗಿದೆ.

ನಮ್ಮ ಮಧ್ಯೆ ಕ್ರಿಯಾಶೀಲವಾಗಿರುವ ಲೇಖಕನ ಬಗ್ಗೆ ಒಂದು ವಿಮರ್ಶೆಯ ಅಥವಾ ಚರ್ಚೆಯ ಸಂಪುಟ ರೂಪಿಸುವಾಗ ಒಂದು ಸಾಹಿತ್ಯ ಪತ್ರಿಕೆಯ ಸಂಪಾದಕರಿಗೂ ಜನಪ್ರಿಯ ಟ್ಯಾಬ್ಯುಲಾಯಿಡ್‌ಗಳ ಸಂಪಾದಕರಿಗೂ ಇರುವ ವ್ಯತ್ಯಾಸ ಎಂದರೆ ಹೇಳಿಕೆ, ಪ್ರತಿ ಹೇಳಿಕೆ ಮುಂತಾದ ವಾಗ್ವಾದಗಳಿಗಿಂತ ಒಬ್ಬ ಲೇಖಕನ ಮಾತುಗಳ ಜೊತೆಗೆ ಅವನ ಮೌನವನ್ನು ಹಿಡಿದಿಡುವ ಕ್ಷಮತೆ. ತಮ್ಮ ಮೇಲಿನ ಆರೋಪಗಳಿಗೆಲ್ಲಾ ದೇವನೂರರಿಂದ ಉತ್ತರ ಹೊರಡಿಸಿರುವುದು ಹೆಗ್ಗಳಿಕೆಯ ವಿಷಯವೇ ಅಲ್ಲ. ಹೇಳಿಕೆ ಉತ್ತರ ಇವುಗಳಿಂದ ಮೀರಿದ ಒಬ್ಬ ಲೇಖಕನ ವ್ಯಕ್ತಿತ್ವವನ್ನ ಸಾಲುಗಳ ಮಧ್ಯದ ಧ್ವನಿಯಂತೆ ನಾವು ಗುರುತಿಸಬೇಕಾಗುತ್ತದೆ. ಜೊತೆಗೆ ಇಲ್ಲಿನ ಲೇಖನಗಳ ವಿಷಯ ವಿಸ್ತಾರ ಮತ್ತು ಪ್ರಾಮುಖ್ಯತೆ ದೊಡ್ಡದಾಗಿದ್ದರೂ ಅದನ್ನ ವಿನ್ಯಾಸಗೊಳಿಸಿರುವ ರೀತಿಯಲ್ಲಿ ಸಂಪಾದಕರ ವಿಫಲತೆ ಎದ್ದು ತೋರುತ್ತದೆ. ಅನೇಕ ಲೇಖನಗಳನ್ನು ಕೈಬಿಡಬಹುದಿತ್ತು. ಲೇಖಕನೊಬ್ಬನ ವ್ಯಕ್ತಿತ್ವದ ಪ್ರಭಾವಲಯದಲ್ಲಿ ಕರಗಿ ಹೋದಾಗ ಸಂಪಾದಕನ ವಿವೇಚನೆ ಮಸುಕಾಗುತ್ತದೆ ಇಂಥಾ ಎಚ್ಚರ ಈ ಪುಸ್ತಕದ ಗಾತ್ರವನ್ನು ಕಾಯಬಹುದಾಗಿತ್ತು, ಸಂಪಾದಕರ ಕ್ಷಮತೆ ವ್ಯಕ್ತವಾಗುವುದು ಈ ದಿಸೆಯಲ್ಲಿ; ದೇವನೂರು ಸಾಹಿತ್ಯದ ಬಗ್ಗೆ ಅವರ ವ್ಯಕ್ತಿತ್ವದ ಬಗ್ಗೆ ಬರೆದ ಬರಹಗಳು ಜೊತೆಗೆ ದೇವನೂರರ ಬರಹದ ಸ್ಯಾಂಪಲ್ಲು (ಇದು ಅಗತ್ಯವಿರಲಿಲ್ಲ) ಎಲ್ಲವನ್ನೂ ಒಟ್ಟಾಗಿ ಇಡುಕಿರಿದಂತೆ ಚೌಚೌ ಆಗಿ ಕಾಣುವ ಈ ಪುಸ್ತಕ ತುಂಬಾ ಮೌಲಿಕವಾದದ್ದು ಎನ್ನುವ ಬಗ್ಗೆ ಯಾವ ಅನುಮಾನವೂ ಇಲ್ಲ. ಆದರೆ ಅದು ಮೌಲಿಕವಾಗಿದ್ದ ಮಾತ್ರಕ್ಕೆ ಇನ್ನಷ್ಟು ಅಚ್ಚುಕಟ್ಟಾಗಿ ಸುಸಂಬದ್ಧವಾಗಿ ರೂಪುಗೊಳ್ಳಬೇಕಿತ್ತು ಎನ್ನುವ ಮಾತು ಹೇಳದೆ ಇರಲಾಗದು. ಈಗಾಗಲೇ ಇಪ್ಪತ್ತೈದು ಪುಸ್ತಕ ಪ್ರಕಟಿಸಿರುವ ಅನುಭವ 'ಅಭಿನವದ' ಬೆನ್ನಿಗಿದೆ. ದಿನ ಕಳೆದ ಹಾಗೆಲ್ಲಾ ಎಲ್ಲರೂ ನಿರೀಕ್ಷಿಸುವುದು ಉತ್ತಮ ಬೆಳವಣಿಗೆಯನ್ನ.



## ನದಿಯ ನೀರಿನ ತೇವ (ಕವನ ಸಂಕಲನ)

**ಮಮತಾ ಜಿ. ಸಾಗರ**

ಪ್ರ : 1998, ಪುಟಗಳು : xxiv + 56 ಬೆಲೆ : ರೂ. 60/-

**ಇಳಾ ಪ್ರಕಾಶನ, ಬೆಂಗಳೂರು - 18**

ಇದು ಮಮತಾ ಜಿ. ಸಾಗರ ಅವರ ಎರಡನೆಯ ಕವನ ಸಂಕಲನ 1992ರಲ್ಲಿ ಹೊರಬಂದ 'ಕಾಡನವಿಲಿನ ಹೆಜ್ಜೆ'ಗಿಂತಾ ತಮ್ಮದೇ ಶೈಲಿ ನಿರೂಪಣೆ ಇವುಗಳಲ್ಲಿ ಭಿನ್ನ ದಾರಿ ತುಳಿದ ಮಮತಾ ಕಾವ್ಯ ರಚನೆ ಮತ್ತು ಸಂವಹನೆ ಬಗ್ಗೆ ಈ ಸಂಕಲನದಲ್ಲಿ ವಿಭಿನ್ನ ಪ್ರಯೋಗ ನಡೆಸಿದ್ದಾರೆ.

ಶಬ್ದ-ಅರ್ಥ-ಆಕಾರ-ಅವಕಾಶಗಳ ಸಂಭಂದಾಂತರವನ್ನು ತಮ್ಮ ಕವಿತೆಗಳ ಮೂಲಕ ಗಂಭೀರವಾಗಿ ನೋಡಲು ಮಮತಾ ಯತ್ನಿಸಿದ್ದಾರೆ. "ಕವಿತೆಯೆಂದರೆ ಒಂದು ಕಪ್ಪು ಕಾಫಿಯ ಹಾಗೆ" ಎನ್ನುವ ಮೂಲಕ ಎ. ಕೆ. ರಾಮಾನುಜನ್‌ರ ಕಾವ್ಯ ಪ್ರಯೋಗಗಳು ನೆನಪಿಗೆ ತರುತ್ತಾರೆ. ಆದರೆ ಇವರ ಹಿಂದಿನ ಸಂಕಲನದಲ್ಲಿದ್ದ ಆರ್ದ್ರತೆ ಮತ್ತು ತುಡಿತದ ಆವೇಶಗಳ ಜಾಗವನ್ನ ಈ ಸಂಕಲನದ ಪ್ರಯೋಗಶೀಲತೆ ನುಂಗಿ ಹಾಕಿದೆ. Egoist self ಅನ್ನು ಮೀರುವ ಪ್ರಯತ್ನದಲ್ಲಿ ಕವಿತೆಗಳು Feminist ಆಗುವ ಸೂಕ್ಷ್ಮಗಳ ಕಡೆ ಹೊರಟು, ಕೆಲವು ಕಡೆ ತೆಳುವಾದ ಹೇಳಿಕೆಗಳ ಹಾಗೆ ಕಾಣಬರುತ್ತದೆ. 'ಬಂಗಾರದ ಬೈಂಗನ್' 'ಬೆಳದಿಂಗಳೂಟ', 'ಪ್ರೀತಿಯ ಹುಡುಗ' ಇವೆಲ್ಲಾ ತಮ್ಮ ಶುದ್ಧ ಸಂವೇದನೆಗಳಿಂದ ಸೆಳೆಯುವ ಕವನಗಳಾಗಿವೆ.

ನಾನು ಅಂದರೆ
ಒಂದು ಜೊತೆ ಮೆತ್ತಗಿನ ಮೊಲೆ
ತೊಡೆ ಸಂದಲ್ಲಿ ಅಡಗಿದ
ಕತ್ತಲ ಕೋಶ

ಈ ರೀತಿಯ ಬೆಚ್ಚಿ ಬೀಳಿಸುವ ಸಾಲುಗಳು ಕೆಲವು ಕಡೆ ಕಾಣಬರುತ್ತವೆ. ಆದರೂ ಇವುಗಳ ನಾಟಕೀಯತೆ ಅಷ್ಟು ರುಚಿಸುವುದಿಲ್ಲ. ಗೃಹಿಣಿಯ ಆರ್ತತೆ ಹೊಂದಿರುವ ಈ ಕವಿತೆಗಳ ಲೋಕ ವಿಭಿನ್ನವಾದದ್ದು. ಮಮತಾ ಈಗ ನೆಲೆಸಿರುವ ಹೈದರಾಬಾದಿನ ಪರಿಸರದ ವಿವರಗಳನ್ನು ಜೊತೆಗೂಡಿಸಿಕೊಂಡು ಅದು ಸ್ಥಳಾತೀತವೂ ಕಾಲಾತೀತವೂ ಆದ ಅನುಭವವಾಗಿ ರೂಪುಗೊಂಡಿದೆ. ನಾಲ್ಕು ಭಾಗಗಳಾಗಿ ವಿಂಗಡಿಸಿರುವ ಈ ಸಂಕಲನದ ತೇವ ಪ್ರಯೋಗಶೀಲತೆಯಲ್ಲಿ ಕಮ್ಮಿಯಾಗಿದೆ. ಸುದೀರ್ಘ ಮುನ್ನುಡಿ ಬರೆದಿರುವ ಕೆ. ವಿ. ತಿರುಮಲೇಶ್ ಮಮತಾರ ಕಾವ್ಯಕ್ಕಿಂತ ಹೆಚ್ಚು ಅವರ ಮೊದಲ ಸಂಕಲನದ ಬಗೆಗಿನ ಅಡಿಗ, ಕಿ.ರಂ.ರ ಅಭಿಪ್ರಾಯಗಳನ್ನೇ ಮುಖ್ಯವಾಗಿ ಭಾವಿಸಿ ಚರ್ಚಿಸಿದ್ದಾರೆ.



**ಏಕಾಂತದ ಮಳೆ** (ಕವನ ಸಂಕಲನ)

ಲೇ: ಎಂ. ಆರ್. ಭಗವತಿ, 1999, ಪ್ರ: 68

ಬೆಲೆ : ರೂ. 35/- ಪ್ರ: ಕ್ರೈಸ್ಟ್ ಕಾಲೇಜು ಕನ್ನಡ ಸಂಘ

**ಕ**ವಿತೆಯೆಂದರೆ ನನ್ನದೇ ದನಿಯಲ್ಲಿ ಹಾಡುವ ಹಾಡು; ಒಂದು ಅಳಿಲು ಸೇವೆ ಎನ್ನುವ ಸ್ಪಷ್ಟವಾದ ತಿಳುವಳಿಕೆಯೊಂದಿಗೆ ತಮ್ಮ ಅನುಭವಗಳಿಗೆ ಅಕ್ಷರ ರೂಪು ಕೊಡಲು ಪ್ರಯತ್ನಿಸಿರುವ ಎಂ. ಆರ್. ಭಗವತಿ ಅವರ ಮೊದಲ ಸಂಕಲನ ಇದು. ಸಾಹಿತ್ಯದ ಗಂಭೀರ ವಿದ್ಯಾರ್ಥಿಯಾಗಿ ಕಾವ್ಯವನ್ನೂ ಅವರು ಭಾವಿಸಿರುವ ರೀತಿ ಕುತೂಹಲಕರ, ಇವತ್ತು ಬರೆಯ ಹೊರಡುವ ಬಹುಪಾಲು ಹೆಣ್ಣುಮಕ್ಕಳ ಹೇಳಿಕೆಗಳನ್ನ ಕಾವ್ಯವಾಗಿಸುವ ಸರ್ಕಸ್ಸು ಇವರಲ್ಲಿ ಕಾಣಬರುವುದಿಲ್ಲ. ಮುಗ್ಧವಾದ ಆದರೆ ಧ್ವನಿಪೂರ್ಣವಾದ ಕನಸುಗಳು ಏಕಾಕಿತನ ಮತ್ತು ಬೆರಗುಗಳು

ಇಲ್ಲಿ ಬಿಡಿಸಿಟ್ಟುಕೊಂಡಿವೆ. ಭಾಷೆಯನ್ನ ಎಲ್ಲೂ ದುಂದು ಮಾಡದೆ ಶಕ್ತವಾದ ಪ್ರತಿಮೆಗಳು ಮತ್ತು ಕವಿತೆಯ ಓಟ ಓದುಗರಿಗೆ ಖುಷಿ ಕೊಡುವ ಸಂಗತಿ. ಯಾವ ಸಿದ್ಧಾಂತಗಳು ಚಳುವಳಿಗಳ ಓನ್ನೆಲೆಯಲ್ಲಿ ಅನುಭವಗಳನ್ನು ಎದುರುಗೊಳ್ಳದೆ ತಾನು ತಾನಾಗಿ ತುಡಿಯುವ ತುಡಿತಗಳು ಇಲ್ಲಿ ಎದ್ದು ಕಾಣುತ್ತವೆ. ಮುನ್ನುಡಿಯಲ್ಲಿ ಎಸ್. ಜಿ. ಸಿದ್ಧರಾಮಯ್ಯನವರು ಗುರುತಿಸುವ ಹಾಗೆ ಭಗವತಿಯವರ ಕಾವ್ಯದ ಮೂಲ ದ್ರವ್ಯ ಕನಸು ಮತ್ತು ಮಳೆಯಾಗಿದೆ. ಅದರಲ್ಲೂ ಮಳೆ ಹುಟ್ಟಿಸುವ ಮುದುರಿಕೊಳ್ಳುವ ಅಂತರ್ಮುಖಿಯಾಗುವ ಏಕಾಂತದಲ್ಲಿ ಮನಸ್ಸಿನ ಮಳೆಗೆ ದಿಕ್ಕುಗೆಡಿಸುವ ನೋವು ಒಬ್ಬಂಟಿತನಗಳನ್ನ ಎದುರಿಸುತ್ತಲೇ ಬದುಕಿನ ಬಗ್ಗೆ ಪ್ರೀತಿಯನ್ನ ಬೆರಗನ್ನ ಜತನವಾಗಿ ಕಾದಿಟ್ಟುಕೊಳ್ಳುವ ಬಗೆ ಇಲ್ಲಿನ ಕವಿತೆಗಳಲ್ಲಿದೆ. "ನನ್ನ ಮೌನ ಅರ್ಥವಾಗದಿದ್ದರೆ ನನ್ನ ಮಾತೂ ಅರ್ಥವಾಗುವುದಿಲ್ಲ" ಎಂಬಂಥ ಅರ್ಥಪೂರ್ಣ ಸಾಲುಗಳನ್ನ ಬರೆದ ಭಗವತಿಯವರ ಕಾವ್ಯದಿಂದ ಇನ್ನಷ್ಟು ನಿರೀಕ್ಷೆಗಳನ್ನು ಹೊಂದಬಹುದಾಗಿದೆ.



ಕೆ.ಕೆ. ಹೆಬ್ಬಾರ್



# ಹಳೆಯ ಪುಟ

## ಡಿ. ವಿ. ಗುಂಡಪ್ಪ

ಪೂರ್ವ ಕಾಲದ ಅಭಿಪ್ರಾಯ ಸಂಪ್ರದಾಯಗಳನ್ನು ನಮ್ಮ ಕಾಲದ ತಿಳಿವಳಿಕೆಯ ಸುಲೋಚನದ ಮೂಲಕ ನೋಡಿ ಗುಣದೋಷ ನಿಷ್ಕರ್ಷೆ ಮಾಡುವುದು ನ್ಯಾಯವಾಗದು. ವ್ಯಾಸರು ವೇದವನ್ನು ಗ್ರಾಮಾಫೋನ್ ಹಲಗೆಗಳಲ್ಲಿ ಬರಸಿಡದೆ ಅದರ ಬಹುಭಾಗವನ್ನು ಕಳೆದುಬಿಟ್ಟರೆಂಬ ಆಕ್ಷೇಪಣೆ ಎಷ್ಟು ಯುಕ್ತವೋ, —ವಿಜಯನಗರದ ರಾಜರು ರೈಲು ಹಾಕಿಸಿರಲಿಲ್ಲವೆಂಬ ಆಕ್ಷೇಪಣೆ ಎಷ್ಟು ಉಚಿತವೋ, —ರಾಮಾಯಣ ಭಾರತಗಳಲ್ಲಿ ಕಾಣಬರುವ ವರ್ಣಾಶ್ರಮ ವ್ಯವಸ್ಥೆಯನ್ನೂ ಸ್ತ್ರೀಸ್ಥಾನ ನಿಷ್ಕರ್ಷೆಯನ್ನೂ ನಾವು ಆಕ್ಷೇಪಿಸುವುದು ಅಷ್ಟು ಸಾಧುವಾಗಿರುತ್ತದೆ. ನೀತಿಭಾವನೆಗಳು ಎಲ್ಲ ದೇಶಗಳಲ್ಲಿಯೂ ಕಾಲಕ್ರಮದಲ್ಲಿ ಪಾರಂಪರ್ಯ ಸರಣಿಯಲ್ಲಿ (ಎವೊಲ್ಯೂಷನ್) ಬೆಳೆದು ಪರಿಷ್ಕೃತವಾದವು. ಯಾವ ಜನದಲ್ಲಿಯೂ ಅವು ಒಂದೇ ಸಲ ಸಮಗ್ರವಾಗಿ ಸಾರ್ವಕಾಲಿಕ ರೂಪದಲ್ಲಿ ಹುಟ್ಟಿರುವುದಿಲ್ಲ. ನೀತಿಯ ಲೋಕಾನ್ವಯರೂಪ ಎಲ್ಲೆಲ್ಲಿಯೂ ಲೋಕಾನುಭವದ ಫಲಿತಾಂಶ. ೧೮೫೦ ನೆಯ ಇಸ್ವಿಯಲ್ಲಿ ಮೋಟರುಬಂಡಿಗಳೂ ಏರೋಪ್ಲೇನುಗಳೂ ನಿರ್ಮಿತವಾಗದ್ದಕ್ಕೆ ಯಾರು ಜವಾಬ್ದಾರರೋ, ಅದೇ ಇಸ್ವಿಯಲ್ಲಿ ಹರಿಜನೋದ್ಧಾರದ ಚಳವಳಿ ನಡೆಯದ್ದಕ್ಕೂ ಅವರೇ ಜವಾಬು ಕೊಡಬೇಕಾದವರು. ಇಂದಿನ ಪರಿಸ್ಥಿತಿಯ ಅಳತೆಕೋಲಿನಿಂದ ಹಿಂದಿನ ಪರಿಸ್ಥಿತಿಯ ನ್ಯಾಯಾನ್ಯಾಯಗಳನ್ನು ಅಳೆಯಹೊರಡುವುದು ಅಸಂಗತ. ನಮಗಿರುವ ವಸ್ತುಜ್ಞಾನವೆಲ್ಲ ಪೂರ್ವಿಕರಿಗೆ ಇರಲಿಲ್ಲವೆಂದು ಯಾರಾದರೂ ಹೇಳುವುದಾದರೆ ಅದಕ್ಕೆ ಎದುರು ಹೇಳುವುದು ಕಷ್ಟ. ಆದರೆ ಪೂರ್ವಿಕರ ಉದ್ದೇಶ ಕೆಟ್ಟದ್ದು, ನಮ್ಮದರಷ್ಟು ಒಳ್ಳೆಯದಲ್ಲ ಎಂದು ನೀವು ಹೇಳುವುದಾದರೆ ಅದನ್ನೊಪ್ಪಿಕೊಳ್ಳುವುದು ಕಷ್ಟ. ರೇಡಿಯೋವಿನ ಕಲ್ಪನೆ ಅವರಿಗಿರಲಿಲ್ಲವೆಂದರೆ ಅದು ನಮ್ಮ ಸ್ವಾಭಿಮಾನದ ಕಲ್ಪನೆಯೇ ಆದೀತು. ವಾಸ್ತವಾಂಶವೇನೆಂದರೆ ಮಾನವಪ್ರಗತಿ ಒಂದು ಬೆಳವಣಿಗೆ. ಅದು ಒಂದು ಸಂದರ್ಭಸಂಯೋಗವನ್ನಪೇಕ್ಷಿಸುತ್ತದೆ. ಅದು ಶೂನ್ಯಾವರಣದಲ್ಲಿ (ವ್ಯಾಕ್ಯೂಮ್‌ನಲ್ಲಿ) ಆಗತಕ್ಕದ್ದಲ್ಲ. ಅದಕ್ಕೆ ಬಾಹ್ಯಪ್ರಚೋದನೆ ಇರಬೇಕು. ಅದಿದ್ದರೆ ಪ್ರಗತಿ ಅದಕ್ಕೆ ಪ್ರತ್ಯುತ್ತರವಾಗಿ ಸಂಭವಿಸುತ್ತದೆ. ಚೋದನೆ (ಸ್ಟಿಮ್ಯುಲಸ್) ಪರಿವರ್ತನೆಗಳ (ರೆಸ್ಪಾನ್ಸ್) ಸರಪಣಿಯೇ ಪ್ರಗತಿ. ಅದಕ್ಕೆ ಕಾಲ ಬೇಕು—ಎಲ್ಲ ಬೆಳವಣಿಗೆಗೂ ಬೇಕಾದಂತೆ. ಲೋಕದ ವಿಜ್ಞಾನಾಭಿವೃದ್ಧಿಯಲ್ಲಿ ಕಾಲಪುರುಷನ ಭಾಗ ಒಂದಿಷ್ಟು ಹೇಗೋ, ನೀತಿವಿವೇಕಾಭಿವೃದ್ಧಿಯಲ್ಲಿಯೂ ಅದು ಹಾಗೆ ಇರುತ್ತದೆ. ಆದದ್ದರಿಂದ ನಾವು ಓದುವ ಕಾವ್ಯ ಯಾವ ಸಮಾಜದ್ದೋ, ಯಾವ ಕಾಲದ್ದೋ, ಆ ಸಮಾಜದ ಮತ್ತು ಆ ಕಾಲದ ನೀತಿಭಾವನೆಗಳನ್ನೂ ಮೂಢಭಕ್ತಿಗಳನ್ನೂ ಕೂಡ—ನಾವು ಆ ಕಾವ್ಯದ ಬಗೆಗೆ ಅಂಗೀಕರಿಸಿಕೊಳ್ಳಬೇಕು. ಈ ಚಾರಿತ್ರಿಕ ನ್ಯಾಯದ (ಹಿಸ್ಟಾರಿಕಲ್ ಜಸ್ಟಿಸ್) ದೃಷ್ಟಿಯಿಂದ ಸಹ ಕಾವ್ಯವಾಚಕನು ತಾತ್ಕಾಲಿಕವಾಗಿ ತನ್ನನ್ನು ತಾನೇ ಸಮಯಾಂತರಕ್ಕೂ ಮತಾಂತರಕ್ಕೂ ಮನಸಾ ವರ್ಗಾಯಿಸಿಕೊಳ್ಳುವುದು ಯುಕ್ತವಾಗುತ್ತದೆ. ಆ ಮನಸ್ಸಿನ ಉದಾರತೆಯೂ ನ್ಯಾಯಸೂಕ್ಷ್ಮವೇದಿತೆಯೂ ಕಾವ್ಯಭಕ್ತಿಯು ನಮ್ಮಿಂದ ಅಪೇಕ್ಷಿಸುವ ಆತ್ಮಸಂಯಮದ ಅಂಶಗಳು.

'ಸಾಹಿತ್ಯ ಶಕ್ತಿ', ೧೯೫೦

## ಪುಸ್ತಕ ಸ್ವೀಕಾರ

**ಗಜಲ್,** *ಡಾ|| ಸರಜೂ ಕಾಟ್ಕರ್,* ಪು : 60, ಬೆಲೆ : ರೂ. 35, ಪ್ರ : 1999
ವೈಶಾಖ ಪ್ರಕಾಶನ, 9ನೇ ಮೇನ್ ಹನುಮಂತನಗರ, ಬೆಂಗಳೂರು-560 019

**Poems of Sarajookatkar** ಅನು: *ಡಾ|| ಕೆ. ವಿ. ವೆಂಕಟರಮಣ* ಪು: 60 ಬೆಲೆ : ರೂ. 60/- ವೈಶಾಖ ಪ್ರಕಾಶನ, 9ನೇ ಮೇನ್, ಹನುಮಂತನಗರ, ಬೆಂಗಳೂರು-19

**ಚಹರೆ,** *ಡಾ|| ಹೆಚ್. ಎಸ್. ಶ್ರೀಮತಿ,* ಪು : 148, ಬೆಲೆ : ರೂ. 70/-, ಪ್ರ: 1999
ಇಳಾ ಪ್ರಕಾಶನ, 36, 80 ಅಡಿರಸ್ತೆ, ರಾಘುವನಗರ, ನ್ಯೂಟಿಂಬರ್‌ಯಾರ್ಡ್ ಲೇಔಟ್ ಬೆಂಗಳೂರು-560 026

**ನಕ್ಕುಬಿಡೆ ಗೆಳತಿ** (ಕವನ ಸಂಕಲನ) *ಸುಶೀಲಾ ಸೋಮಶೇಖರ್,* ಪು: 60, ಬೆಲೆ : ರೂ. 35/- ಪ್ರ: 1998 ಪುನೀತ್ ಪ್ರಕಾಶನ, ಸಕಲೇಶಪುರ, ಹಾಸನ ಜಿಲ್ಲೆ

**ಚಟಾಕಿ ಪಟಾಕಿ** (ಚುಟುಕು ಸಂಕಲನ) *ಎನ್. ಶರಣಪ್ಪ ಮೆಟ್ರಿ,* ಪು: 60, ಬೆಲೆ: ರೂ. 30/- ಪ್ರ: 2001, ಅನ್ನಪೂರ್ಣ ಪ್ರಕಾಶನ, ಬಸ್‌ಸ್ಟಾಂಡ್ ರೋಡ್, ಗಂಗಾವತಿ-583 227

**ದೂರದ ದಾರಿ ತೀರದ ದಾಹ** (ಕವನ ಸಂಕಲನ) *ಎಂ.ಎಂ. ಪುರದನ ಗೌಡರ,* ಪು: 52 ಬೆಲೆ : ರೂ. 15/-, ಪ್ರ: 1999, ಸ್ನೇಹ ಸ್ಪಂದನ, ಸಾಹಿತ್ಯ ಪ್ರಕಾಶನ, ಕಲಘುಟಗಿ-4

**ಕನವರಿಕೆ** (ಕವನಗಳ ಕಂತೆ) *ಬಾಸುಮ ಕೊಡಗು,* ಪು: 32, ಬೆಲೆ : ರೂ. 12/-, ಪ್ರ: 2001
ಪದ್ಮ ಪ್ರಕಾಶನ, ಶ್ರೀದೇವಿ ಸಂಕೀರ್ಣ ರಥಬೀದಿ, ಸುಳ್ಯ, ದ.ಕ.

**ಬಸವ ಚಳುವಳಿಯ ಭೌತಿಕವಾದಿ ಅಧ್ಯಯನ,** *ಶ್ರೀ ಪಿ. ಎಸ್. ಪಾಟೀಲ,* ದ್ವಿ.ಮು.: 2000 ಬೆಲೆ : ರೂ. 25/- ದಿ. ಬಂಥನಾಳ ಶ್ರೀ ವೃಷಭಲಿಂಗೇಶ್ವರ ವಿದ್ಯಾವರ್ಧಕ ಟ್ರಸ್ಟ್, ಲಚ್ಯಾಣ

**ಒಂದಿಷ್ಟು ಹಸಿಮಣ್ಣು** (ಕವನಗಳು) *ರೂಪಾ ಹಾಸನ,* ಪು: 76, ಬೆಲೆ : ರೂ. 75/- ಪ್ರ : 2000, ನೆಲೆಮನೆ ಪ್ರಕಾಶನ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ

**ಕೋಗಿಲೆಗೆ ಕಲಿಸಲಾರೆ** (ಕವನ ಸಂಕಲನ) *ಮೀನಾ ಸದಾಶಿವ,* ಪು: 68, ಬೆಲೆ : ರೂ. 25/- ಪ್ರ: 1997, ಸಂಕ್ರಮಣ ಪ್ರಕಾಶನ, ಬನಶಂಕರಿ ಎರಡನೇ ಹಂತ, ಬೆಂಗಳೂರು-560 070

**ಪಂಜರದೊಳಗೂ ಇಂಚರ** (ಕವನ ಸಂಕಲನ) *ಭ. ರಾ. ವಿಜಯಕುಮಾರ್,* ಪು: 48 ಬೆಲೆ : ರೂ. 25/-, ಪ್ರ: 1998, ಸಹೃದಯ ಪ್ರಕಾಶನ, 545/2, ಇ ಬ್ಲಾಕ್, ಕೃಷ್ಣರಾಜಪುರಂ, ಹಾಸನ-573 201

**ಮನೆಯಿಂದ ಮನೆಗೆ** (ಕವನ ಸಂಗ್ರಹ), *ಹಾಸನದ ವಿವಿಧ ಕವಿಗಳು,* ಪ್ರ: 2000
ಬೆಲೆ : ರೂ. 30/-, ಸಹೃದಯ ಪ್ರಕಾಶನ, 548/2, 'ಇ' ಬ್ಲಾಕ್, ಕೆ. ಆರ್. ಪುರಂ
ಹಾಸನ-573 201

**ಪೂಜಾಫಲ** (ಕಥಾ ಸಂಕಲನ) ಲೇ: *ಶ್ರೀವಿಜಯ,* ಪ್ರ: 2001, ಬೆಲೆ : ರೂ. 80/-
ಶ್ರೀ ವಿಜಯ ಪ್ರಕಾಶನ, ಸಂತ ಫಿಲೋಮಿನಾ ರಸ್ತೆ, ಷರಿಫ್ ಕಾಲೋನಿ, ಹಾಸನ-573 201

**ಜಿರಲೆ ಉಂಡೆ** (ನಗೆ ಬರಹಗಳು) ಲೇ: *ಪ್ರಭಾಮಣಿ ನಾಗರಾಜ,* ಪ್ರ: 2001

ಬೆಲೆ : ರೂ. 60/- ಚೆಂಡೂರ್ ಪ್ರಕಾಶನ, ರಾಜರಾಜೇಶ್ವರಿ ನಗರ, ಬೆಂಗಳೂರು-560 098

**ಗರಿಕೆ** (ಕವನ ಸಂಕಲನ) ಲೇ: *ಪ್ರಭಾಮಣಿ ನಾಗರಾಜ,* ಪ್ರ: 2001, ಬೆಲೆ : ರೂ. 60/-

ಭಾಗೀರಥಿ ಪ್ರಕಾಶನ, ಪಟ್ಟಣಗೆರೆ, ರಾಜೇಶ್ವರಿನಗರ, ಬೆಂಗಳೂರು-560 098

**ವಸುಂಧರೆ** (ಖಂಡಕಾವ್ಯ) ಲೇ : *ಭಾರತೀಪುತ್ರ,* ಪು : 28, ಬೆಲೆ : ರೂ. 18/-
ಭಾರತೀಯ ಸಾಹಿತ್ಯ ಪರಿಷತ್ತು, ನಾಗಮಂಗಲ-571 432

**ತುಮುಲದ ತುಡಿಗಳು** (ಶೃಂಗಾರ ಶತಕ) ಲೇ: *ಭಾರತೀಪುತ್ರ,* ಪ್ರ: 28, ಬೆಲೆ : ರೂ. 14/-
ಪ್ರ: 1996, ಭಾರತೀಯ ಸಾಹಿತ್ಯ ಪರಿಷತ್ತು, ನಾಗಮಂಗಲ-571 432

**ರುದ್ರಾಭಿಷೇಕ** (ಕವನಗಳು) ಲೇ: *ಭಾರತೀಪುತ್ರ,* ಬೆಲೆ : ರೂ. 10/-, ಪ್ರ: 1996
ಭಾರತೀಯ ಸಾಹಿತ್ಯ ಪರಿಷತ್ ನಾಗಮಂಗಲ-571 432

**ದ್ರೌಪದಿ - ಒಂದು ಅಧ್ಯಯನ** (ಲೇಖನಗಳು) *ಡಾ|| ಎಸ್. ವಿ. ಪ್ರಭಾವತಿ,* ಪ್ರ: 1996
ಪು: 152, ಬೆಲೆ : ರೂ. 50/-, ಅಪರ್ಣ ಪ್ರಕಾಶನ, 468, 25ನೇ ಮೇನ್, BTM ಲೇಔಟ್
ಬೆಂಗಳೂರು-560 076

**ಫಾದರ್** : ಮೂಲ : ಆಗಸ್ಟ್ ಸ್ಟ್ರಿಂಡ್ ಬರ್ಗ್ ಅನು: *ಸಿ. ನಾಗಣ್ಣ,* ಪ್ರ.ಮು.:2000, ಪು : 80
ಬೆಲೆ : ರೂ. 40/-, ಪ್ರ: ಅಭಿನವ, 4148/ಎ ಮೂರನೆಯ ಮುಖ್ಯ ರಸ್ತೆ, 'ಬಿ' ವಿಭಾಗ, ರಾಜಾಜಿನಗರ
ಬೆಂಗಳೂರು-21 ಮತ್ತು ಶಾಂತಲಾ ಕಲಾವಿದರು

**ಕರುಳಿ ಬಳ್ಳಿಯ ಸೊಲ್ಲು** *ಡಾ|| ರಾಜೇಂದ್ರ ಚೆನ್ನಿ* (ಲೇಖನಗಳು) ಪ್ರ.ಮು.: 2001, ಪು: 72
ಬೆಲೆ: ರೂ. 40/-, ಪ್ರ : ಅಭಿನವ ಪ್ರಕಾಶನ, ಬೆಂಗಳೂರು

**'ಪರ್ವ'** ಒಂದು ಸಮೀಕ್ಷೆ ಸಂ: *ಡಾ. ವಿಜಯಾ,* ದ್ವಿ.ಮು. : 1999, ಪು: 117, ಬೆಲೆ: ರೂ. 60/-
ಇಳಾ ಪ್ರಕಾಶನ, ಬೆಂಗಳೂರು-18

**ಅಹೋ** (ಕವನ ಸಂಕಲನ) ಲೇ: *ಅ.ಹರ. ಗೋಪಾಲ ಭಟ್ಟ,* ಪ್ರ.ಮು. : 1999, ಪು: 60
ಬೆಲೆ: ರೂ. 35/-, ಅಕ್ಷಯ ಪ್ರಕಾಶನ, ಶಿವಮೊಗ್ಗ - 577 201

**ಚಿಟ್ಟೆ** (ಕವನ ಸಂಕಲನ) ಲೇ : *ಅ.ಹರ. ಗೋಪಾಲ ಭಟ್ಟ,* ಪ್ರ.ಮು. : 1999, ಪು: 64
ಬೆಲೆ : ರೂ. ಪ್ರ : ಅಕ್ಷಯ ಪ್ರಕಾಶನ, ಶಿವಮೊಗ್ಗ-577 201

ಬಲ್ಬು (ಕವನ ಸಂಕಲನ) ಲೇ : *ಅ.ಹರ. ಗೋಪಾಲಭಟ್ಟ,* ಪ್ರ.ಮು. : 2000, ಪು: 60
ಬೆಲೆ: ರೂ. 35/-, ಅಕ್ಷಯ ಪ್ರಕಾಶನ, ಶಿವಮೊಗ್ಗ-577 201



## ಈ ಸಂಚಯದ ಲೇಖಕರು

ಡಾ|| ಪುರುಷೋತ್ತಮ ಬಳಿಮಲೆ: A-35, ಮಾಸೂದ್‌ಪುರ, ವಸಂತ್‌ಕುಂಜ್, ನವದೆಹಲಿ-110 070

ವ್ಯಾಸರಾಯ ಬಲ್ಲಾಳ : ಉತ್ತರಾಯಣ # 1064, ಕುಮಾರಸ್ವಾಮಿ ಬಡಾವಣೆ ಮೊದಲನೆ ಹಂತ, ಬೆಂಗಳೂರು-560 078

ಬಿ. ಎಸ್. ಜಯಪ್ರಕಾಶ ನಾರಾಯಣ : 'ಕನ್ನಡ ಪ್ರಭಾ' #1 ಇಂಡಿಯನ್ ಎಕ್ಸ್‌ಪ್ರೆಸ್ ಬಿಲ್ಡಿಂಗ್ ಕ್ವೀನ್ಸ್ ರಸ್ತೆ, ಬೆಂಗಳೂರು-560 001

ರಾಮಲಿಂಗಪ್ಪ ಟಿ. ಬೇಗೂರು : 416, ಎರಡನೇ ಕ್ರಾಸ್, ಗೌರೀ ಪೇಟೆ, ಕೋಲಾರ-563 101

ಎಸ್. ಜಿ. ಸಿದ್ಧರಾಮಯ್ಯ : ಹೊಂಬೆಳಗು, ನಳಂದ ಶಾಲೆ ಹತ್ತಿರ, ಶೆಟ್ಟಿಹಳ್ಳಿ ಗೇಟ್, ತುಮಕೂರು-572 102

ವಾಸುದೇವ ನಾಡಿಗ್ : T.G.T. Kannada, J.N.V. Maha Camp, Raipur dist. M.P.-492 015

ಎಸ್. ಎಸ್. ರಾಘವೇಂದ್ರರಾವ್ : ನಂ. 7, ಶ್ರೀಮಾತಾ, 15ನೇ ಕ್ರಾಸ್, ಜೆ. ಪಿ. ನಗರ 5ನೇ ಹಂತ, ಬೆಂಗಳೂರು-560 078

ಜಿ.ಪಿ. ಬಸವರಾಜು: ಪ್ರಧಾನ ಉಪಸಂಪಾದಕರು, ಪ್ರಜಾವಾಣಿ, 71, ಎಂ.ಜಿ. ರಸ್ತೆ, ಬೆಂಗಳೂರು-1

ಕೆ. ವಿ. ಸುಬ್ರಹ್ಮಣ್ಯಂ : 40/3, 10ನೇ ಕ್ರಾಸ್, ಮೊದಲ ಮುಖ್ಯರಸ್ತೆ, ಬಾಪೂಜಿನಗರ, ಬೆಂಗಳೂರು-560 026

ಎನ್. ಕೆ. ಹನುಮಂತಯ್ಯ : C/o. ಭಾಸ್ಕರ ರೆಡ್ಡಿ, ಬಿ.ವಿ.ಟಿ. ಲೇಔಟ್, ಅರಕೆರೆ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-560 076

ಜೆ. ಶ್ರೀನಿವಾಸಮೂರ್ತಿ : ಸಂಸ್ಕೃತ ಅಧ್ಯಾಪಕ, ಎಂ.ಇ.ಎಸ್. ಕಾಲೇಜು, 15ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು-560 003

ಎಸ್. ಜಿ. ವಾಸುದೇವ್ : S-71, S.T.ಬೆಡ್ ಲೇಔಟ್, ಕೋರಮಂಗಲ, ಬೆಂಗಳೂರು-560 034

ಯೂಸೂಫ್ ಅರಕ್ಕಲ್ : 663, 1ನೇ ಮೇನ್ 'ಸಿ' ಬ್ಲಾಕ್, AES ಲೇಔಟ್, ಬ್ರೂಕ್‌ಫಿಲ್ಡ್ಸ್ ಎದುರು, ಬೆಂಗಳೂರು-560 037

ಚಿ. ಶ್ರೀನಿವಾಸರಾಜು : 21(8), ಚಿರಂಜೀವಿ, ಹಳೇ ಈಜುಕೊಳದ ರಸ್ತೆ, ಕೋದಂಡರಾಮಪುರ, ಮಲ್ಲೇಶ್ವರಂ, ಬೆಂಗಳೂರು-560 003

ಕೆ. ಟಿ. ಶಿವಪ್ರಾಸದ್ : 44, ಕುವೆಂಪುನಗರ, ಹಾಸನ- 573 201

ಆನಂದ ಋಗ್ವೇದಿ : 189, 8ನೇ ಕ್ರಾಸ್, ಲೇಬರ್ ಕಾಲನಿ, ನಿಟ್ಟುವಳ್ಳಿ ರಸ್ತೆ, ದಾವಣಗೆರೆ-577 002

# ಸಂಚಯದ ಪ್ರಕಟಣೆಗಳು






| | | | |
|---|---|---|---|
| 1) | ಗಾಜು (ಕವಿತೆಗಳು) | ವಿವಿಧ ಕವಿಗಳು | ರೂ. 8-00* |
| 2) | ಎ.ಕೆ. ರಾಮಾನುಜನ್ ಹೆಜ್ಜೆ ಗುರುತು | ವಿವಿಧ ಲೇಖಕರು | ರೂ. 15-00* |
| 3) | ಸಿಕಾಡ (ಕವನ ಸಂಕಲನ) | ಜಿ. ಕೆ. ರವೀಂದ್ರಕುಮಾರ್ | ರೂ. 35-00 |
| 4) | ಡ್ರೀಮರ್ (ಕವಿತೆಗಳು) | ಡಿ. ವಿ. ಪ್ರಹ್ಲಾದ್ | ರೂ. 18-00 |
| 5) | ಅಭಿಮುಖ (ಲೇಖನಗಳು) | ಎನ್.ಎಸ್. ಶ್ರೀಧರಮೂರ್ತಿ | ರೂ. 20-00 |
| 6) | ಬಗೆ ತೆರೆದ ಬಾನು (ಸಾಹಿತಿಗಳ ಸಂದರ್ಶನಗಳು) | ಸಂ. ಡಿ. ವಿ. ಪ್ರಹ್ಲಾದ್ | ರೂ. 60-00 |
| 7) | ಚೌಕಟ್ಟು (ಸಮಕಾಲೀನ ದೃಶ್ಯಕಲೆ ಕುರಿತು) | ಸಂ. ಎಚ್.ಎ.ಅನಿಲ್‌ಕುಮಾರ್ | ರೂ. 25-00 |
| 8) | ಮೌನದ ಹೊತ್ತು (ಅನುವಾದಿತ ಕವಿತೆಗಳು) | ಸು. ರಂ. ಎಕ್ಕುಂಡಿ | ರೂ. 20-00 |
| 9) | ಕನಸು ಕೋಳಿಯ ಕತ್ತು (ಕವನಗಳು) | ಗೋವಿಂದ ಹೆಗಡೆ | ರೂ. 30-00 |
| 10) | ನಾಟಕ ಅಂತರಂಗ (ಲೇಖನಗಳು) | ಎ.ಆರ್. ನಾಗಭೂಷಣ | ರೂ. 40-00 |
| 11) | ಮುಕ್ತಛಂದ ನೆನಪಿನ ಸಂಪುಟ | ಶಾಂತಿನಾಥ ದೇಸಾಯಿ | ರೂ. 85-00 |




*ಪ್ರತಿಗಳು ಮುಗಿದಿವೆ.

*ಪ್ರತಿಗಳಿಗಾಗಿ ಸಂಪರ್ಕಿಸಿ*

ಸಂಚಯ

ನಂ. 100, 2ನೇ ಮೇನ್, 6ನೇ ಬ್ಲಾಕ್, 3ನೇ ಹಂತ

3ನೇ ಘಟ್ಟ, ಬನಶಂಕರಿ, ಬೆಂಗಳೂರು - 560 085 ದೂರವಾಣಿ : 080-6791925

# ಈ ಸಂಚಯದಲ್ಲಿ

*ರಾಮಲಿಂಗಪ್ಪ ಟಿ. ಬೇಗೂರ್, ವಾಸುದೇವ ನಾಡಿಗ್, ಎಸ್. ಜಿ. ಸಿದ್ಧರಾಮಯ್ಯ,*
*ಎನ್.ಕೆ. ಹನುಮಂತಯ್ಯ ಅವರ ಕವಿತೆಗಳು*

**ನಮ್ಮ ಅಕಾಡೆಮಿಗಳು ಒಂದು ಚರ್ಚೆ**

*ಭಾಗವಹಿಸಿದ್ದಾರೆ: ಜಿ. ಪಿ. ಬಸವರಾಜು, ಡಾ|| ಹೆಚ್. ಎಸ್. ರಾಘವೇಂದ್ರರಾವ್,*
*ಪ್ರೊ|| ಜಿ ಶ್ರೀನಿವಾಸರಾಜು, ಜಿ. ಶ್ರೀನಿವಾಸಮೂರ್ತಿ, ಕೆ. ವಿ. ಸುಬ್ರಹ್ಮಣ್ಯಂ,*
*ಎಸ್. ಜಿ. ವಾಸುದೇವ್, ಕೆ. ಟಿ. ಶಿವಪ್ರಸಾದ್, ಯೂಸೂಫ್ ಅರಕ್ಕಲ್, ಡಿ. ವಿ. ಪ್ರಹ್ಲಾದ್*

**ಚಂದ್ರಶೇಖರ ಕಂಬಾರರ ನಾಟಕಗಳಲ್ಲಿ**
**ವಸಾಹತುಶಾಹಿಯ ಸ್ವರೂಪದ ಗ್ರಹಿಕೆ**

*ಡಾ|| ಪುರುಷೋತ್ತಮ ಬಿಳಿಮಲೆ*

**ಸಾಹಿತಿ ಮತ್ತು ಸಾಮಾಜಿಕ ಹೊಣೆಗಾರಿಕೆ**

*ವ್ಯಾಸರಾಯ ಬಲ್ಲಾಳ*

**ಕನ್ನಡವನ್ನು ಕುರಿತು ಯೋಚಿಸುತ್ತಾ**

*ಬಿ. ಎಸ್. ಜಯಪ್ರಕಾಶ ನಾರಾಯಣ*

**ಪುಸ್ತಕ ಪರಿಚಯ ಇತ್ಯಾದಿ**

**Sanchaya** (Quarterly) Edited Printed & Published by **D. V. Prahlad**
No. 100, 2nd Main, 6th Block, 3rd Stage, 3rd Phase, Banashankari,
Bangalore-560 085 Ph: 6791925